೧೨ನೆಯ ವರುಷದ ೨ನೆಯ ಕುಡಿ

# ಸ್ವರ್ಗ ಡೋಲಿಗಳು



ಶ್ರೀ ಸಿಂಪಿ ಲಿಂಗಣ್ಣ

ಚಾಲುಕ್ಯ ವಿಕ್ರಮ ವರುಷ ೮೭೩

ಸ್ವಾತಂತ್ರ್ಯ ದಿನ
೨೬—೧—೫೦

ಬೆಲೆ ೧—೮—೦

# ವಾಚಕರಲ್ಲಿ ಬಿನ್ನಹ

ಈ 'ಸ್ವರ್ಗದೋಲೆಗಳು' ಮಿಂಚಿನಬಳ್ಳಿಯ ೧೦ನೆಯ ವರುಷದ ೨ನೆಯ ಕುಡಿಯು. ಸ್ವರ್ಗದೋಲೆಗಳು ಎಂಬ ತಲೆಕಟ್ಟನ್ನು ಕಂಡು ಯಾರೂ ಗಾಬರಿಯಾಗಬೇಕಿಲ್ಲ. ಅವು ಮೃತ್ಯುಲೋಕದ ಅಂಚೆಪೆಟ್ಟಿಯಲ್ಲಿಯೆ ಹಾಕಲ್ಪಟ್ಟು ಕನ್ನಡಿಗರ ವಿಚಾರಪಥವನ್ನು ಕೆರಳಿಸುವಂಥವುಗಳಾಗಿವೆ. ಆದಿಕವಿ ಪಂಪನಿಂದ ಮೊದಲ್ಗೊಂಡು ಶಾಂತಕವಿ ಮೊದಲಾದವರ ವರೆಗೆ ಕನ್ನಡ-ಕಾಲಪ್ರವೃದ್ಧಿಯಾಗುತ್ತ ಬಂದಿದ್ದರೂ ಕನ್ನಡ ಸಮಷ್ಟಿಪುರುಷನ ಪೂರ್ಣಾವತಾರವು ನಮಗಿನ್ನೂ ಕಾಣಬಂದಿಲ್ಲ. ಅದು ಕಾಣಸಿಗಬೇಕಾದರೆ ಕನ್ನಡ ಕ್ಷಿತಿಜದಲ್ಲಿ ಮೂಡಿ, ಬೆಳಗಿ, ಅಮರಜೀವನವನ್ನು ಪಡೆದು ಪರಲೋಕಕ್ಕೆ ತೆರಳಿದ ಅನೇಕಾನೇಕ ವ್ಯಕ್ತಿಗಳ ತುಂಬುಜೀವನವನ್ನು ವ್ಯಕ್ತಪಡಿಸುವ ಅವರ ಅಮರಕೃತಿಗಳು ಇಂದಿಗೂ—ಅದೇಕೆ—ಎಂದೆಂದಿಗೂ ಕನ್ನಡಿಗರಿಗೆ ಕೈಗಂಬದಂತೆ ಮಾರ್ಗದರ್ಶಕವಾಗಿವೆ. ಆ ಅಮರಕೃತಿಗಳ ಆಳವಾದ ಅಭ್ಯಾಸವನ್ನು ಮಾಡಿ, ಅವುಗಳ ತಿರುಳಿನ ಮಥಿತಾರ್ಥವನ್ನರಿತು ಕೊಂಡರೆ ಕನ್ನಡಿಗರ ಸಾರ್ಥಕತೆಯಾದಂತಾದೀತು. ಅವರ ಜೀವನಕೃತಿಗಳೂ ಕನ್ನಡಿಗರ ಹೃದಯಪಟಲದಲ್ಲಿ ಚಿರಪಟ್ಟವನ್ನು ಪಡೆದು ಸ್ವತ್ವದರ್ಥವನ್ನು ತಿಳಿಯಪಡಿಸಲು ಶಾಶ್ವತ ನಿಧಿಯೂ ಆಗಬಹುದು. ಆಯಾಯ ವ್ಯಕ್ತಿಗಳ ತುಂಬುಜೀವನವೇ ಏಕೀಭವಿಸಿ ಸಮಷ್ಟಿಪುರುಷನನ್ನು ನಿರ್ಮಾಣ ಮಾಡಬಲ್ಲ ವೆಂಬ ಮಾತನ್ನು ಈ ಸ್ವರ್ಗದೋಲೆಗಳನ್ನು ಬರೆದವರ ಮೂಲಕವಾಗಿ ನಾವು ಇಲ್ಲಿ ಕಂಡುಕೊಳ್ಳಬಹುದಾಗಿದೆ.

ಇಂಥ ವಿಚಾರಲಹರಿಯಿಂದ ತುಳುಕುತ್ತಿರುವ ಈ ಸ್ವರ್ಗದೋಲೆಗಳನ್ನು ಗೆ. ಸಿ. ಪಿ. ಲಿಂಗಣ್ಣನವರು ಬರೆದಿದ್ದಾರೆ. ಹೊಸ ಹೊಸ ಕಲ್ಪನಾತರಂಗಗಳಿಂದ ಕೂಡಿದ ಅವರ ಸಾಹಿತ್ಯಜೀವನವು ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಮಿನುಗತೊಡಗಿದೆ. ಅಂಥವರು ನಮ್ಮ ಮಿಂಚಿನಬಳ್ಳಿಯಲ್ಲಿ ತಮ್ಮ ಈ ಕೃತಿಯನ್ನು ಪ್ರಕಾಶನಗೊಳಿಸಲು ಅನುಕೂಲರಾದ ಬಗ್ಗೆ ನಾವು ಅವರಿಗೆ ತುಂಬಾ ಉಪಕೃತರಾಗಿದ್ದೇವೆ.

ಬುರ್ಲಿ ಬಿಂದುಮಾಧವ
ಸಂಪಾದಕ.

ಓಂ! ಭಗವಾನ್!!

# ಅರಿಕೆ



ಕನ್ನಡನಾಡಿನಲ್ಲಿ ಆಗಿಹೋದ ಕವಿಗಳು, ಮತಸ್ಥಾಪಕರು, ಶರಣರು, ರಾಜ್ಯಸ್ಥಾಪಕರು, ರಾಜರು ಕೆಲವರು ತಮ್ಮ ನಿವಾಸಸ್ಥಾನದಿಂದ ಇಂದಿನ ಕನ್ನಡಿಗರಿಗೆ ಅವರ ಸಮಸ್ಯೆಗಳಾದ ಕರ್ನಾಟಕದ ಏಕೀಕರಣ, ಒಕ್ಕಟ್ಟು, ಶೌರ್ಯ, ಕಾವ್ಯ, ಭಕ್ತಿ, ಯಶೋಜೀವನ, ಪಾತಿವ್ರತ್ಯ, ವೈರಾಗ್ಯ, ಜ್ಞಾನ, ಅಧ್ಯಾತ್ಮ, ಅಸ್ಪೃಶ್ಯತಾ ನಿವಾರಣೆ ಮೊದಲಾದ ವಿಷಯಗಳನ್ನು ತಂತಮ್ಮ ಶೈಲಿ, ವಿಚಾರಸರಣಿಗಳಲ್ಲಿ ಪತ್ರರೂಪದಿಂದ ಬರೆದು ಮಾರ್ಗದರ್ಶನ ಮಾಡಿದಂತೆ ಕಲ್ಪಿಸಲಾಗಿದೆ. ಈ “ಸ್ವರ್ಗದೋಲೆಗಳು” ಪಾಂಡೀಚೇರಿಯ ಆಶ್ರಮ ಮಂತ್ರಿಗಳಾದ ಶ್ರೀ. ನಲಿನೀಕಾಂತ ಗುಪ್ತರ “ಸ್ಮೃತೀರ ಕಥೋಪಕಥನ”ವೆಂಬ ಬಂಗಾಲೀ ಪುಸ್ತಕದಿಂದ ಪ್ರಚೋದನಗೊಂಡು ಬರೆದವುಗಳಾಗಿವೆ. ಅನ್ನ, ಬಡವರ ಕಷ್ಟನಿವಾರಣೆ ಮೊದಲಾದ ತಾತ್ಕಾಲಿಕ ಜೀವನ ಸಮಸ್ಯೆಗಳಿಗೆ ಇದರಲ್ಲಿಯ ವಿಚಾರಗಳು ಪ್ರತ್ಯಕ್ಷವಾಗಿ ನೆರವೀಯಲಾರವೆಂದು ತೋರಿದರೂ ಅಂಥ ವಿಚಾರಗಳನ್ನು ಸಾವಧಾನದಿಂದ ಬಿಡಿಸುವ ತಿಳುವಳಿಕೆಗೆ ಮೂಲಾಧಾರವಾಗಬಲ್ಲವೆಂದು ತೋರಿಬರದೆ ಇರಲಾರವು. ಕನ್ನಡ ಸಮಷ್ಟಿ ಪುರುಷನ ಜ್ಞಾನ–ಶಕ್ತಿಗಳ ಪ್ರಾಚೀನ ಭಾಂಡಾರದ ಬೀಜಗಳಿಂದ ನಾವಿಂದು ನಮ್ಮ ಕೃಷಿಕ್ಷೇತ್ರದಲ್ಲಿ ಉತ್ತಮವಾದ ಬೆಳೆಗಳನ್ನು ಬೆಳೆಕೊಳ್ಳಬಹುದಾಗಿದೆ. ಕನ್ನಡಿಗರು ಕೃತಜ್ಞತಾಬುದ್ಧಿಯಿಂದಲೂ, ವಿನಮ್ರಭಾವದಿಂದಲೂ ಕನ್ನಡ ಸಮಷ್ಟಿಪುರುಷನಿಗೆ ಮೊರೆಹೊಕ್ಕರೆ, ವಿಪುಲವಾದ ನಿವಾರಣೋಪಾಯಗಳು ದೊರಕೊಳ್ಳುವುದರಲ್ಲಿ ಸಂದೇಹವಿಲ್ಲ. ಹಾಗೆ ಮೊರೆಹೊಕ್ಕುದರಿಂದ ಪಡೆದ ಒಂದು ಬೆಳೆ ಈ “ಸ್ವರ್ಗದೋಲೆಗಳು.”

ಇದರೊಳಗಿನ ಕೆಲವು ಪತ್ರಗಳು ಮೊದಲು ರಬಕವಿಯ "ಪ್ರಗತಿ" ಯಲ್ಲಿ ಕಾಣಿಸಿಕೊಂಡವು. ಅವು ಜನಪ್ರಿಯವಾದವೆಂದೂ, ಬೇಗನೆ ಪುಸ್ತಕ ರೂಪದಿಂದ ಪ್ರಕಟಿಸೋಣವೆಂದೂ ಅದರ ಸಂಪಾದಕರು ತಿಳಿಸಿದರು. ಆದರೆ ಆಗ ಓಲೆಗಳೆಲ್ಲವನ್ನೂ ಬರೆದು ಮುಗಿಸಿರಲಿಲ್ಲ. ಮುಂದೆ ಮಿಂಚಿನಬಳ್ಳಿಯ ಸಂಪಾದಕರಿಗಾಗಿ, ಕಲ್ಪನೆಯಲ್ಲಿ ಬರೆದ ಓಲೆಗಳನ್ನೆಲ್ಲ ಸಾಳಗಿಳಿಸಿ ಪೂರ್ಣ ಗೊಳಿಸಿದೆ. ಅದಿಂದು ಪುಸ್ತಕರೂಪದಿಂದ ಕನ್ನಡಿಗರ ಕೈಗೆ ಬಂದಿದೆ. 'ಪ್ರಗತಿ'ಯಲ್ಲಿ ಸ್ಥಳ ಕೊಟ್ಟಿದ್ದಕ್ಕಾಗಿ ಅದರ ಸಂಪಾದಕರಿಗೂ, ಪುಸ್ತಕರೂಪ ದಿಂದ ಪ್ರಕಟಿಸುವ ಹೊಣೆ ಹೊತ್ತ ಶ್ರೀ. ಬುರ್ಲಿ ಅವರಿಗೂ ನನ್ನ ನೆನಕೆ ಗಳನ್ನು ಸಲ್ಲಿಸುವೆನು.

ಕೆಲವೊಂದು ಓಲೆಗಳನ್ನೋದಿ ಹೆಚ್ಚು ಬರೆಯಲು ಪ್ರೋತ್ಸಾಹಿಸಿದ ಸಹೋದರ ಶ್ರೀ. ಬೇಂದ್ರೆಯವರಿಗೆ ಈ ಕೃತಿಯನ್ನು ಅರ್ಪಿಸುವ ಬಯಕೆ ಯನ್ನು ನಿವೇದಿಸಿದಾಗ ಅವರದಕ್ಕೆ ಒಪ್ಪಿಕೊಂಡಿರುವುದಕ್ಕಾಗಿ ಪ್ರಾಂಜಲತೆ ಯಿಂದ ಅವರಿಗೆ ಕೃತಜ್ಞನಾಗಿರುವೆನು.

ಸಿಂಪಿ ಲಿಂಗಣ್ಣ

ಚಡಚಣ.



# ಪರಿವಿಡಿ



ಪುಟ

## ಅ ರ್ಪ ಣ

ಕನ್ನಡಾಂಬಿಕೆಯ ತನಯರಾದ

ಸಹೋದರ

**ಶ್ರೀ. ದ. ರಾ. ಬೇಂದ್ರೆ, ಎಂ. ಎ.**

ಅವರಿಗೆ —

ಸಿಂಪಿ ಲಿಂಗಣ್ಣ



# ಸ್ವರ್ಗದೋಲೆಗಳು



## ೧

## ಪಂಪನ ಆದಿಕವಿತ್ವ

ಕನ್ನಡನಾಡಿನ ಅಣ್ಣ ಕುಲದ ಕನ್ನಡಿಗರೇ,

'ಹಿತಮಿತ ಮೃದುವಚನ'ನೆಂದೂ 'ಪ್ರಸನ್ನಗಂಭೀರ ವಚನರಚನ-ಚತುರ'ನೆಂದೂ ಹೇಳಿಕೊಂಡ ನಿಮ್ಮ ಹಳೆಯ ಕವಿ ಪಂಪನನ್ನು ಪುರಸ್ಕರಿಸುವ ನಾಡಿನವರಿಗೆ ನನ್ನೊಡಲೊಳಗಿನ ಒಂದೆರಡು ನುಡಿಗಳನ್ನು ಬಿಚ್ಚಿಡಬೇಕೆಂದು ಬಯಸಿ ಈ ಓಲೆ ಬರೆಯುತ್ತಿದ್ದೇನೆ. ಉದಾರಹೃದಯರಾದ ಬೇರೆ ಕವಿಬಂಧುಗಳು ನನ್ನ ಹಿರಿತನವನ್ನು ಬಗೆದು 'ಆದಿಕವಿ'ಯೆಂದು ಸನ್ಮಾನಿಸಿದ್ದಾರೆ. "ಪ್ರಾಯದ ಪೆಂಪೆ ಪೆಂಪೆಮಗೆ!" ಎಂದು ಅದಕ್ಕೆ ಉತ್ತರ ಕೊಡುವೆನು ಅಷ್ಟೇ. ನನಗೂ ಹಿಂದಿನ ಕನ್ನಡ ಕವಿಗಳ ಹೆಸರುಗಳೆಲ್ಲ ಕಾಲಗರ್ಭದಲ್ಲಿ ಕಾಣದಂತಾದಾಗ ನಾನು ನಿಜವಾಗಿಯೂ ಆದಿಕವಿಯೇ ಸರಿ; ಅಗ್ರಕವಿಯಂತೂ ಇದ್ದೇ ಇದ್ದೇನೆ; ಇತ್ತೀಚಿನ ಸಾವಿರ ವರುಷಗಳಲ್ಲಿ ಆಗಿಹೋಗಿರುವ ಕವಿಗಳಿಗೆಲ್ಲ ನಾನು ಅಗ್ರಕವಿಯಾಗಿಯೇ ಇದ್ದೇನೆ. ವಿಮರ್ಶಕರು ತೂಗಿ-ತೊನೆದು, ಅರೆದು-ಒರೆದು, ಎಳಸಿ-ಬೆಳಸಿ ಕವಿ ಕಾಳಿದಾಸನೊಡನೆ ಕಣಕ್ಕಿಳಿಸಿ, ಧೈರ್ಯದಿಂದ ಅಥವಾ ಧೈರ್ಯಗೆಟ್ಟು 'ಪಂಪನು ಕನ್ನಡದ ಕಾಳಿದಾಸ'ನೆಂದು ತೀರ್ಪಿಗೆ ಬಂದಿದ್ದಾರೆ; ಅದು ಅವರ ಅತಿರೇಕವಾದ ಔದಾರ್ಯವೆಂದೇ ನಾನು ಗ್ರಹಿಸುತ್ತೇನೆ. "ಪಸರಿಪ ಕನ್ನಡ-ಕ್ಕೊಡೆಯನೊರ್ವನೆ ಸತ್ಕವಿ ಪಂಪನಾವಗಂ" ಎಂದು ಆರು ನೂರು ವರುಷಗಳಿಂದಲೂ ಉಗ್ಗಡಿಸುತ್ತ ಬಂದಿರುವ ಬಣ್ಣನೆಯ ನುಡಿಯು ನುಡಿದಾಯಿಗೇ ಮುಟ್ಟಲೆಂದೇ ಹಾರಯಿಸುತ್ತೇನೆ.

ವೈದಿಕಧರ್ಮವನ್ನು ತೊರೆದು ಜೈನಧರ್ಮವನ್ನು ಅವಲಂಬಿಸಿದ್ದು ನಿಜವೇ ಈ ಕೆಲಸವನ್ನು ಪಂಪನು ಮಾಡಿದನೆಂದೂ, ಇದರಿಂದ ಬ್ರಾಹ್ಮಣ-ಜೈನ ಸಂಸ್ಕೃತಿಗಳು ಒಂದು ವಿಧದಲ್ಲಿ ಸಮರಸಗೊಂಡವೆಂದೂ ಬುದ್ಧಿವಂತರು ಹೇಳುತ್ತಾರೆ. ಅದು ನಿಜವೇ. ಈ ಕ್ರಿಯೆಯು ಬರಿಯ ಧರ್ಮಾಂತರವಲ್ಲ; ಮತಾಂತರವಂತೂ ಅಲ್ಲವೇ ಅಲ್ಲ, ಆತ್ಮಸಂಸ್ಕಾರ. ಹುಟ್ಟಿದ ಜಾತಿ ಉತ್ತಮ; ನಂಬಿದ ಧರ್ಮವೂ ಉತ್ತಮ ಧರ್ಮ. ಆತ್ಮಸ್ವಾತಂತ್ರ್ಯವುಳ್ಳ ವಾಣಿಯೇ ಕವಿವಾಣಿಯೆಂದೂ, ಅಂಥ ಕವಿವಾಣಿಗೆ ಸಾವಿರವೊಂದೇ ಏಕೆ, ಏಸೋ ಸಾವಿರ ವರುಷ ಬದುಕುವುದಕ್ಕೆ ಆಯುಷ್ಯ ಬಲವಿರುತ್ತದೆ.

ಪೂರ್ವಸಮುದ್ರದ ಕರೆಯಲ್ಲಿ ಹುಟ್ಟಿ, ಪಶ್ಚಿಮ ನಿಟ್ಟಿನ ಮಲೆನಾಡಿನಲ್ಲಿ ನೆಲೆಯೂರಿದ ಬನವಾಸಿಯನ್ನು ನೆನೆದವನು ನಾನು. ಕುಂಜರವು ವಿಂಧ್ಯವನ್ನು ನೆನೆವಂತೆ, ನನ್ನ ಜೀವವು ಪೂರ್ವದ ನಾಡಿನಲ್ಲಿ ಕಾಣಿಸಿಕೊಂಡರೆ, ಭಾವವು ಬನವಾಸಿಯನ್ನು ಪೋಣಿಸಿಕೊಂಡಿತ್ತು. ತೆಂಕಣಗಾಳಿ ಸೋಂಕಿ ಸುಖಸ್ಪರ್ಶವನ್ನುಂಟುಮಾಡುವಾಗಲೂ ಸೊಗಸಾದ ಗಾಯನವು ಕಿವಿಗಳನ್ನು ತಣಿಸುತ್ತಿರುವಾಗಲೂ ನನ್ನ ಮನವು ಬನವಾಸಿಯನ್ನು ನೆನೆಸುತ್ತಲೇ ಇರುವದು; ಅಂಕುಶದಿಂದ ತಿವಿದರೂ ಗಣಿಸದ ಆನೆಯಂತೆ ಬನವಾಸಿಯನ್ನು ನೆನೆಯುತ್ತಿರುವದು. ಹುಟ್ಟಿದ ಜಾತಿ ಒಂದು, ಬೆಳೆದ ಜಾತಿ ಬೇರೊಂದು; ಜೀವ ಕೊಟ್ಟ ನಾಡು ಒಂದಾದರೆ, ಜನ್ಮ ಕೊಟ್ಟ ನಾಡು ಬೇರೊಂದು. ಅದರಂತೆ ನಾನು ರಚಿಸಿದ ಕಾವ್ಯಗಳೂ ಎರಡು ಬಗೆಯವು. ಆದಿಪುರಾಣ ಒಂದು, ವಿಕ್ರಮಾರ್ಜುನವಿಜಯ ಇನ್ನೊಂದು. ಒಂದು ಧಾರ್ಮಿಕ, ಇನ್ನೊಂದು ಲೌಕಿಕ. ಹುಟ್ಟುಮತದ ಪರಿಪಾಕವೊಂದಾದರೆ, ತೊಟ್ಟಮತದ ಪರಿಪಾಕ ಇನ್ನೊಂದು. ಗುಣಾರ್ಣವನಾದ ಅರಿಕೇಸರಿ ದೊರೆಯು ಈ ಪಂಪನ ಗುಣಾತಿಶಯಗಳನ್ನು ಮೆಚ್ಚಿಕೊಂಡನು; ಕವಿತಾಗುಣಾರ್ಣವನಾದ ನಾನು ಪುರಾಣಪ್ರಸಿದ್ಧರಾದ ರಾಜರಿಗಿದ್ದ ಉದಾತ್ತ ಗುಣಗಳನ್ನು ಅರಿಕೇಸರಿಯಲ್ಲಿ ಕಂಡು ಮೆಚ್ಚಿದೆನು. ರಾಜನ ಮೆಚ್ಚಿಕೆ 'ಕವಿತಾಗುಣಾರ್ಣವ' ಎಂಬುವ ಬಿರುದನ್ನು ಕವಿಗೆ ಸಲ್ಲಿಸಿತು; ಕವಿಯ ಮೆಚ್ಚಿಕೆ ತನ್ನ ಸ್ವಾಮಿಯ ಕೀರ್ತಿಯನ್ನು ನಿರಂತರವೂ ನಿಲ್ಲಿಸಿತು.

ಹೊಟ್ಟೆಯೊಳಗಿನ ಸಿಟ್ಟಿನಿಂದ ಕವಿ ಮಾತ್ರ ಆಗಬಹುದು; ನನಗೆ ರಟ್ಟೆಯೊಳಗೂ ಸಿಟ್ಟು ಇದ್ದುದರಿಂದ ನಾನು ಕಲಿಯೂ ಆಗಿದ್ದೆನು. ಕೆಚ್ಚಿನ ಕಲಿಯೂ ಅಭಿಮಾನ ಮೂರ್ತಿಯೂ ಆದರೂ ನನಗೆ "ಇಳಾಧಿನಾಥರಂ ಓಲಗಿಸಿ ಬಾಳ್ವುದೆ ಕಷ್ಟಂ" ಎಂಬುದು ಚೆನ್ನಾಗಿ ತಿಳಿದಿತ್ತು; "ಪೆರರೀವುದೇಂ, ಪೆರರಿಂದವಪ್ಪುದೇಂ?" ಎಂದು ಗಡುಸಿನಿಂದ ಗುಡುಗುವವನೂ ನಾನಾಗಿದ್ದೆನು. "ಕುಡು, ದಯೆಗೆಯ್-ಎಂಬಿವು ಪೆರರೊಳ್ ನಡೆಗೆ; ಎಮ್ಮ ನಿನ್ನಯೆಡೆಯೊಳ್ ನಡೆಯಲ್ವೇಡ! ಎನಗೆ ನೀ ಕೆಳೆಯನ್ಯೆ" ಎಂದು ಕರ್ಣನನ್ನು ದುರ್ಯೋಧನನು ಕೇಳಿಕೊಂಡಿದ್ದನು. ಆದರೆ ನಮ್ಮಲ್ಲಿ ಆ ಬಗೆಯ ಸ್ನೇಹ-ಸಲುಗೆಗಳು ಸ್ವಾಭಾವಿಕವಾಗಿಯೇ ಇದ್ದವು. ಗುಣಾರ್ಣವನ ಗುಣಪಕ್ಷಪಾತತನವೇ ಸಾವಿರ ವರುಷ ಬಾಳುವ-ಬೆಳಗುವ ಕಾವ್ಯ ನಿರ್ಮಾಣಕ್ಕೆ ನೀರೆರೆಯಿತು. ರಸೋದಧಿಯಲ್ಲಿ ಈಸುವವರು ವ್ಯಕ್ತದಿಂದ ಅವ್ಯಕ್ತದ ಕಡೆಗೆ ಸಾಗುತ್ತಿದ್ದರೂ, ರಸಿಕತೆಯೇ ಅವರ ಜೀವನದ ಜೀವಾಳ; ಜೀವನಕ್ಕೆ ಮಾಧುರ್ಯ ಬರುವುದು ವೈರಾಗ್ಯದಿಂದಲ್ಲ, ರಸಿಕತೆಯಿಂದ. ಅಂತೆಯೇ ಲಲಿತಾಲಂಕರಣನಾದ ನಾನು "ವನಿತಾಕಟಾಕ್ಷ ಕುವಲಯವನ ಚಂದ್ರ"ನಾಗಿದ್ದುದನ್ನು ಹೇಳಿಕೊಂಡಿದ್ದೇನೆ. ಒಲುಮೆಯ ತಿರುಳು ಕಾಣಬೇಕಾದರೆ ಬಣ್ಣದ ಬೆಡಗನ್ನು ಕಣ್ಣೆತ್ತಿ ನೋಡಬೇಕಷ್ಟೇ? ಇದೇ ರಸಿಕತೆಯ ಒಳಗುಟ್ಟು. ಅದಕ್ಕೆ ಮನೆಯೇ-ಬಾಳೇ ಪ್ರಯೋಗಶಾಲೆ; ಮನೆಯವಳೇ-ಬಾಳ್ವೆಣ್ಣೇ ಪ್ರಯೋಗವಸ್ತು. "ಅನಂಗಜಂಗಮಲತಾ ಲಲಿತಾಂಗಿಯರಿಂದ ಮಲ್ತೆ ಸಂಸಾರಂ!"

ಪರಿಶುದ್ಧವಾದ -- ಪರಿಶುಭ್ರವಾದ ಹೃದಯವನ್ನು ಸೂಚಿಸುವ ಮಲ್ಲಿಗೆಯ ಲೇಸು ನಗೆಗೆ ನಯವಾಗದವರು ಯಾರಿದ್ದಾರೆ? ಕಣ್ಣು ಮೂಗುಗಳಿಗೆ ಸೊಗಸಾದ ಸಂಸ್ಕಾರ ಕೊಡುವ ಮಲ್ಲಿಗೆಯಂತೆ, ಕಣ್ಣು ಮನಗಳಿಗೆ ಹಬ್ಬವಾಗಿ, ಒಡಲಿಗೆ ಶಾಂತಿಯಾಗುವ ಯೋಗ್ಯತೆ ಮಾವಿಗಿದೆ. ಮಾವು-ಮಲ್ಲಿಗೆಗಳನ್ನುಳಿದು—"ಪೆರತಾವುದು ಸಂಸಾರಸಾರ ಸರ್ವಸ್ವಫಲಂ?" ಮಾವು ಸವಿದು, ಮಲ್ಲಿಗೆ ಮುಡಿದು ಲಲಿತಾಲಂಕರಣನಾಗಿ ಕುಳಿತುಬಿಟ್ಟರೆ, ಬಾಳು ಬೆಳಗುವದಿಲ್ಲ. ಅದಷ್ಟೇ ರಸಿಕತೆಯಲ್ಲ. ಲಲಿತಲತಾಂಗಿಯನ್ನು ಒಲಿಸಬೇಕಾಗಿರುವಂತೆ, ವಿಜಯಲಕ್ಷ್ಮಿಯನ್ನು ಗೆಲ್ಲುವ ಬಲವೂ, ಮುಕ್ತಿ

ಕಾಂತೆಯನ್ನು ಕೈಗೂಡಿಸಿಕೊಳ್ಳುವ ಛಲವೂ ಬೇಕೇಬೇಕು. ಅವಿಲ್ಲದಿದ್ದರೆ ರಸಿಕತೆ ಏತರದು ? ಮೈಯಲ್ಲಿ ಹೆಕ್ಕು ಮುರಿದುಕೊಂಡಿದ್ದ ಆಯುಧದ ಚೂರುಗಳನ್ನು ಅಯಸ್ಕಾಂತದ ಸಹಾಯದಿಂದ ತೆಗೆಸಿಕೊಳ್ಳುವುದೂ, ಮುಷ್ಟಿಘಾತದಿಂದಾಗಲಿ, ಕತ್ತಿಯೇಟಿನಿಂದಾಗಲಿ ಸಿಡಿದು ಹಾರಿದ ಭಟರ ತಲೆಚಿಪ್ಪುಗಳನ್ನು ಗಂಗಾಜಲಕ್ಕೆಸೆಯುವುದೂ ಯಾರಾದರೂ ತುಸು ಗಟ್ಟಿಗರು ಮಾಡುವ ಕೆಲಸಗಳೆನ್ನಿರಿ. ಆದರೆ ಯುದ್ಧಕಾಲದಲ್ಲಿ ಮೈಗೆ-ತಲೆಗೆ ಬಾಣ ನಟ್ಟರೂ ಪರಿವೆಯಿಲ್ಲದೆ ಹೋರಾಡಿದ್ದು ಅಚ್ಚರಿಯೆನಿಸಲಿಕ್ಕಿಲ್ಲ; ಆದರೆ ಸಂಜೆಗೆ ಬೀಡಾರಕ್ಕೆ ಬಂದಮೇಲೆ ಇಬ್ಬರು ಗಟ್ಟಿಗರು ಎಡಬಲಗಳಲ್ಲಿ ನಿಂತು ಇಕ್ಕುಳದಿಂದ ಅವನ್ನು ಕೀಳುವಾಗ ಇಸ್ಸೆನ್ನದೆ, ಮೈ-ಕೈ ಎಳಕೊಳ್ಳದೆ, ಮುಖವನ್ನು ಸಪ್ಪಗೆ ಸಹ ಮಾಡದೆ ಸಹಿಸಿಕೊಳ್ಳುವ ಧೀರರೇ ನಲ್ಲೆಯ ಪ್ರಿಯಸ್ಪರ್ಶಕ್ಕೆ ಅರ್ಹರು; ಅವರೇ ಗಾನರಸವನ್ನು ಮನವಾರೆ ಕುಡಿಯಲು ತಕ್ಕವರು ಅಂಥವರ ಯುದ್ಧಶ್ರಮವು ಪರಿಹಾರವಾಗುವುದು ತಂಗಾಳಿಯ ಸೇವನೆಯಿಂದಲೇ ಎಂಬುದು ನಿಶ್ಚಯ. ಭೋಗವನ್ನು ಬೀಳುಗಳೆಯದೆ, ಅಲ್ಪ ಮಾರ್ಗವನ್ನು ತುಳಿಯದೆ ತುಂಬುಬಾಳಿನ ಬೆಳಸನ್ನು ಬೆಳೆದುಕೊಳ್ಳ ಬೇಕಾಗಿದೆ. ಸುಖದಲ್ಲಿ ಮುಳುಗಿಹೋದರೂ ಜೀವನದ ಪರಮಾದರ್ಶವನ್ನು ಮರೆಯದಂತಿರಬೇಕಾಗಿದೆ.

ಈ ಆದರ್ಶಸಿದ್ಧಿಗೆ ವೈದಿಕಮತವೇನು ಜೈನಧರ್ಮವೇನು ? ಬಾಳು ಮತಧರ್ಮಗಳಿಗಿಂತ ಕುಲವನ್ನು ಹೆಚ್ಚಾಗಿ ಅವಲಂಬಿಸಿರುತ್ತದೆ. ನಾಲಿಗೆ ತುಬ್ಬುವ ಕುಲವೇ ಬೇರೆ ನಾವು ಸಾಮಾನ್ಯವಾಗಿ ವ್ಯವಹಾರದಲ್ಲಿ ಬಳಸುವ-"ಕುಲಂ ಕುಲಮಲ್ತು; ಚಲಂ ಕುಲಂ; ಗುಣಂ ಕುಲಂ; ಅಭಿಮಾನ ಮೊಂದೆ ಕುಲಂ; ಅಣ್ಮು (ಪೌರುಷ) ಕುಲಂ" ಅಲ್ಲದೆ ನಮ್ಮ ನಿಮ್ಮ ಕುಲ ಗಳೆಲ್ಲ ಆ ಕುಲವನ್ನುಂಟುಮಾಡುವಂಥವುಗಳೇ ಆಗಿವೆ ಇದೀಗ ಪೌರುಷದ ಮಂತ್ರವಿದು. ಈ ಮಂತ್ರವನ್ನು ಈಗಿನ ಕನ್ನಡಿಗರು ಸಿದ್ಧಿಸಿಕೊಳ್ಳಬೇಕಾ ಗಿದೆ; ತಾವು ಕನ್ನಡಕುಲದವರೆಂದು ಕಂಡುಕೊಳ್ಳಬೇಕಾಗಿದೆ; "ಸಿಂಗದ ಮುಪ್ಪುಂ ಇಳಿಕೆವಡೆಗುಮೆ!" ಎಂದು ಕನ್ನಡ ಪರಂಪರೆ ಕೇಳಬೇಕಾಗಿದೆ.

ಬನವಾಸಿನಾಡಿನ ನಂದನವನದಲ್ಲಿ ಮನುಷ್ಯನಾಗಿ ಹುಟ್ಟಬೇಕು; ಮನುಷ್ಯನಾಗಿ ಹುಟ್ಟಿದರೆ ರಸಿಕನಾಗಿ ಬಾಳಬೇಕು. ಆ ಅದೃಷ್ಟವಿಲ್ಲದಿದ್ದರೆ

ಕಡೆಗೆ ಮರಿದುಂಬಿಯೋ ಕೋಗಿಲೆಯೋ ಆಗಿ ಅಲ್ಲಿ ಹುಟ್ಟಿಬಂದು ವಿಹರಿಸ ಬೇಕೆನ್ನುವ ಮಾತು ಸಾವಿರ ವರುಷ ಹಿಂದಿನ ಹಳೆಯದಾದರೂ ಅದರಲ್ಲಿ ಬಾಳಿನ ಸವಿಯಿದೆ; ನಾಡನಲುಮೆ ಇದೆ; ಪ್ರಕೃತಿಪುರುಷರ ನಿತ್ಯಸಂಧಾನದ ಸಂದಿಗ್ಧತೆಯಿದೆ ಭೋಗದ ಸವಿಯನ್ನು ಸವಿಯನಿಂತ ರಸಿಕಹೃದಯವು ಪರಿಪೂರ್ಣ ವಿಕಸನ ಹೊಂದಿದಾಗ ಬಾಳಿನ ಅಸ್ಥಿರತೆಯನ್ನೂ ಮರೆಯ ಲಾರದು ಹಾಗೆ ಮರೆತವರಿಗೆ — "ಪನಿಪುಲ್ಲಿಂ ನಕ್ಕೆ ತೃಷ್ಣೆ ಪೇಳ್ ಪೋಪವುದೇ ?" ಎಂದು ಪ್ರಶ್ನೆ ಮಾಡುತ್ತೇನೆ ಅತಿ ವಿಲಾಸಕ್ಕೆ ವೈರಾಗ್ಯದ ಕಡಿವಾಣ ಬೇಕೇ ಆಗುತ್ತದೆ "ತನು, ರೂಪ, ವಿಭವ, ಯೌವನ, ಧನ, ಸೌಭಾಗ್ಯ, ಆಯುರಾದಿಗಳ್ಗೆ ಎಣೆ—ಕುಡುಮಿಂಚಿನ ಪೊಳೆಪು, ಮುಗಿಲ ನೆಳಲ್, ಇಂದ್ರನ ಬಿಲ್, ಬೊಬ್ಬುಳಿಕೆಯುರ್ಬು ಪರ್ಬಿದ ಭೋಗ!" ಆದಿಪುರಾಣದಲ್ಲಿ ಕುಶಲ ಕಲೆಗಾರ್ತಿಯಾದ ಒಬ್ಬ ನರ್ತಕಿ ಸುಳಿಯುವಳಷ್ಟೇ? ಅವಳು "ಕೋಟಿ ತೆರದಿಂದ ಎಸೆವ ಈ ನಾಟಕಮಂ ತೋರಿ ಮಾಣ್ದಳಿಲ್ಲಳ್; ಬಗೆಯೊಳ್ ನಾಟುವಿನಂ ಆಮರಿ—ಸಂಸ್ಕೃತಿ ನಾಟಕಮುಮಂ ಎನಗೆ ನೆರೆಯತೋರಿದಳೀಗಳ್" ಎಂದು ಪುರುದೇವನು ಅಂದುಕೊಳ್ಳುತ್ತಾನೆ. ಬಹಿರಂಗದ ನಾಟ್ಯವಿಲಾಸವನ್ನು ನೋಡುವ ದೃಷ್ಟಿ ರಸಿಕನದು; ಅಂತ ರಂಗದ ನಾಟ್ಯಲೀಲೆಯನ್ನು ಅರಿಯುವ ದೃಷ್ಟಿ ಮೋಕ್ಷರಸಿಕನದು; ಕುಣಿ ಕುಣಿಯುತ್ತಿರುವಾಗಲೇ ಕಲೆಯು ಒಳ್ಳೆಯ ಭರಕ್ಕೆ ಬಂದಾಗಳೇ ಆ ನಾಟ್ಯಗಾರ್ತಿಯು ಕಾಣೆಯಾಗುತ್ತಾಳೆ. ಅದಕ್ಕಾಗಿ ಆ ದೇಹಾದಿಗಳು ಎಷ್ಟೊಂದು ಅನಿತ್ಯವಾಗಿವೆಯೆಂಬ ವೈರಾಗ್ಯದ ಎಳೆಯು ಪುರುದೇವನ ಮನಸ್ಸಿನಲ್ಲಿ ಕಾಣಿಸಿಕೊಂಡಿತು.

ಈಗ ರಸಿಕತೆಯ ಸ್ಥಳವನ್ನು ಕಾಮುಕತೆ ಕಾದಲತೆಗಳು ಮೈವೆತ್ತಿವೆ. ರಸಿಕನು ಸಂಸಾರವಸ್ತುಗಳೊಳಗಿಂದ ಒಂದೊಂದೇ ಆನಂದಬಿಂದುವನ್ನು ಸವಿದು ತನ್ನ ಹೃದಯದ ತತ್ತಿಯೊಳಗಿನ ರಸವು ಮೈಗೊಳ್ಳುವಂತೆ ಕಾವು ಕೊಡುವನು ಕಾಮುಕತೆ-ಕಾದಲತೆಗಳು ಹೃದಯದ ತತ್ತಿಯನ್ನೊಯ್ದು ಕಾಮಾಗ್ನಿಗೆ ಹಿಡಿದು ಹುರುಪಳಿಸುವವು; ಕ್ರೋಧಾಗ್ನಿಗೆ ಹಿಡಿದು ಬೂದಿ ಗೊಳಿಸುವವು; ಮಾತ್ಸರ್ಯಾಗ್ನಿಗೆ ಹಿಡಿದು ಬೇಯಿಸುವವು. ಹೀಗಾಗಿ ಬಾಳಿನ ಮೊಳಕೆಯೇ ನಾಶವಾಗುತ್ತದೆ. ಮೊಳಕೆಯೇ ಇಲ್ಲದಾದ ಮೇಲೆ

ಗಿಡವೆಲ್ಲಿ — ಮರವೆಲ್ಲಿ? ಮರವೇ ಇಲ್ಲದಾದ ಮೇಲೆ ಪುಷ್ಪವೆಲ್ಲಿ — ಫಲವೆಲ್ಲಿ??

ದಿಗ್ವಿಜಯಿಯಾಗಿ ಬಂದ ಭರತೇಶನು ಷಟ್ಖಂಡಕ್ಕೆ ಒಡೆಯನಾದ ಮೇಲೆ ವೃಷಭಾಚಲಕ್ಕೆ ಬರುತ್ತಾನೆ. ಅಲ್ಲಿ ತನ್ನ ವಿಶ್ವವಿಜಯದ ಸ್ಮಾರಕ ವನ್ನು ಕೆತ್ತಿಸಿ ನಿಲ್ಲಿಸಬೇಕೆಂದು ಆಶೆಪಡುತ್ತಾನೆ; ಎಲ್ಲಿ-ಹೇಗೆ ಮೊದಲಾದ ಸಮಸ್ಯೆಗಳನ್ನು ಯೋಚಿಸುತ್ತಿರಲು — ಚಕ್ರವರ್ತಿಯಾಗಿ ವಿಜಯವನ್ನು ದೊರಕಿಸಿದವನು ನಾನೊಬ್ಬನೇ ಅಲ್ಲ. ಹಿಂದಿನ ಕೋಟ್ಯಂತರ ವರುಷಗಳ ಕಾಲಮಾನದಲ್ಲೆಲ್ಲ ಚಕ್ರವರ್ತಿಗಳು ತಂಡತಂಡವಾಗಿ ಮೆರೆದು, ತಮ್ಮ ಮಹಿಮೆಗೆ ಸ್ಮಾರಕವೆಂದು ಬೆಟ್ಟದ ಪ್ರದೇಶದಲ್ಲೆಲ್ಲಾ ತಂತಮ್ಮ ಪ್ರಶಸ್ತಿ ಗಳನ್ನು ಕೆತ್ತಿಸಿದ್ದಾರೆ. ಇನ್ನೊಬ್ಬನ ಪ್ರಶಸ್ತಿಯನ್ನು ಬರೆಸಬೇಕೆಂದರೆ ಸ್ಥಳವು ಕೂಡ ಇಲ್ಲದಂತೆ ಅವು ಕಿಕ್ಕಿರಿದಿವೆ. ಇದನ್ನೆಲ್ಲ ಚಕ್ರೇಶ್ವರನು ನೋಡಿಯೇ ನೋಡಿದನು. ಅವನಲ್ಲಿ ಮಡುಗಟ್ಟಿ ನಿಂತಿದ್ದ ಗರ್ವರಸವೆಲ್ಲ ಸೋರಿಹೋಯಿತು; ತನ್ನ ಹೆಮ್ಮೆಗೆ ತಳಬುಡವಿಲ್ಲೆಂದು ನಾಚಿಕೊಂಡನು. ಕಡೆಗೆ ಸಂಪ್ರದಾಯವನ್ನು ಪಾಲಿಸುವ ಸಲುವಾಗಿ, ಹಿಂದಿನ ದೊರೆಗಳ ಲ್ಲೊಬ್ಬನ ಪ್ರಶಸ್ತಿಯನ್ನು ಒರೆಸಿಹಾಕಿ, ಆ ಜಾಗದಲ್ಲಿ ತನ್ನ ಸ್ಮಾರಕವನ್ನು ಬರೆಯಿಸಿದನು. ನಿಜವಾಗಿ ಇದು ವಿಜಯವೇ?

ನಮ್ಮ ಜನಕ್ಕೆ ಈಗ ವೈರಾಗ್ಯ ಹೇಳುವುದರ ಆವಶ್ಯಕತೆಯಿಲ್ಲ. ನಿರಾಶಾಮಯ ಜೀವನವು ವೈರಾಗ್ಯದ ತಂದೆ. ಈ ಬದುಕು ಹಳಸಿ ಹೋಗಿದೆ. ಬಾಳುವುದಕ್ಕೆ ಪೌರುಷದ ದಾರಿ ಬೇಕು. ಪೌರುಷವನ್ನು ಸಾಧಿಸುವ ಜೀವನದ ಪ್ರಯೋಗ ನಡೆಯಬೇಕಾಗಿದೆ; ಅಂಥ ಜೀವನಗಳಿಗೆ ಪೌರುಷಸುಧೆಯನ್ನು ಕುಡಿಸುವ ಸಾಹಿತ್ಯ ಬೇಕು. ಅಂಥ ಸಾಹಿತ್ಯವನ್ನು ನಿರ್ಮಿಸುವ ಮಹಾಕವಿ ಬೇಕು. ನನಗೆ ಪುನರ್ಜನ್ಮವು ಪ್ರಾಪ್ತವಾದರೆ ನಾನು ಕರ್ನಾಟಕದಲ್ಲಿ ಹುಟ್ಟಿಬಂದು "ಪೌರುಷವಿಜಯ" ಎಂಬ ಮಹಾ ಕಾವ್ಯವನ್ನು ರಚಿಸುತ್ತೇನೆ. ಜೀವನವನ್ನೂ, ಜೀವವನ್ನೂ ಹೀರುವ ಯಮನನ್ನು ಸೋಲಿಸುವ ವೀರರಸವನ್ನು ಬಳಸುತ್ತೇನೆ ಹೊತ್ತು ಹೊರಟರೆ ಕೋಟಿ ಜೀವ ಹುಟ್ಟಿಸಿ, ಕೋಟಿ ಕೊಲ್ಲುವ ಕೋಟಲೆಯನ್ನು ಕಳೆದೊಗೆ

ಯುವ ಅಮರತೆಯನ್ನು ನನ್ನ ಮಹಾಕಾವ್ಯದಲ್ಲಿ ಚಿತ್ರಿಸುತ್ತೇನೆ. ಸಾವಿರ ವರುಷಗಳ ಹಿಂದೆಯೇ ವೀರದಬ್ಬರವನ್ನು ಗುಡುಗುಡಿಸಿ ಬಿಟ್ಟ ನಾನು, ಇಂದಿನ ಜಗತ್ತಿನಲ್ಲಿ ಅದೆಂಥ ಕಾವ್ಯ ರಚಿಸೇನು? ನಾಡತಾಯಿಯು ತನ್ನ ಅಗ್ರಕವಿಯನ್ನು ಬೇಗನೆ ಕರೆಸಿಕೊಳ್ಳಲಿ ಕರೆದಾಗ ಬರುವೆನೆಂದು ನಿಮಗೆ ಮಾತು ಕೊಡುತ್ತೇನೆ. ಕರೆಸಿಕೊಳ್ಳುವುದು ನಿಮ್ಮ ಕೆಲಸ.

ಇಂತು— ನಿಮ್ಮ ಲಲಿತಾಲಂಕರಣ

**ಅಗ್ರಕವಿ ಪಂಪ.**

---

ಗಿಡವೆಲ್ಲಿ — ಮರವೆಲ್ಲಿ? ಮರವೇ ಇಲ್ಲದಾದ ಮೇಲೆ ಪುಷ್ಪವೆಲ್ಲಿ — ಫಲವೆಲ್ಲಿ??

ದಿಗ್ವಿಜಯಿಯಾಗಿ ಬಂದ ಭರತೇಶನು ಷಟ್ಖಂಡಕ್ಕೆ ಒಡೆಯನಾದ ಮೇಲೆ ವೃಷಭಾಚಲಕ್ಕೆ ಬರುತ್ತಾನೆ. ಅಲ್ಲಿ ತನ್ನ ವಿಶ್ವವಿಜಯದ ಸ್ಮಾರಕವನ್ನು ಕೆತ್ತಿಸಿ ನಿಲ್ಲಿಸಬೇಕೆಂದು ಆಶಿಪಡುತ್ತಾನೆ; ಎಲ್ಲಿ-ಹೇಗೆ ಮೊದಲಾದ ಸಮಸ್ಯೆಗಳನ್ನು ಯೋಚಿಸುತ್ತಿರಲು — ಚಕ್ರವರ್ತಿಯಾಗಿ ವಿಜಯವನ್ನು ದೊರಕಿಸಿದವನು ನಾನೊಬ್ಬನೇ ಅಲ್ಲ. ಹಿಂದಿನ ಕೋಟ್ಯಂತರ ವರುಷಗಳ ಕಾಲಮಾನದಲ್ಲೆಲ್ಲ ಚಕ್ರವರ್ತಿಗಳು ತಂಡತಂಡವಾಗಿ ಮೆರೆದು, ತಮ್ಮ ಮಹಿಮೆಗೆ ಸ್ಮಾರಕವೆಂದು ಬೆಟ್ಟದ ಪ್ರದೇಶದಲ್ಲೆಲ್ಲಾ ತಂತಮ್ಮ ಪ್ರಶಸ್ತಿಗಳನ್ನು ಕೆತ್ತಿಸಿದ್ದಾರೆ. ಇನ್ನೊಬ್ಬನ ಪ್ರಶಸ್ತಿಯನ್ನು ಬರೆಸಬೇಕೆಂದರೆ ಸ್ಥಳವು ಕೂಡ ಇಲ್ಲದಂತೆ ಅವು ಕಿಕ್ಕಿರಿದಿವೆ. ಇದನ್ನೆಲ್ಲ ಚಕ್ರೇಶ್ವರನು ನೋಡಿಯೇ ನೋಡಿದನು. ಅವನಲ್ಲಿ ಮಡುಗಟ್ಟಿ ನಿಂತಿದ್ದ ಗರ್ವರಸವೆಲ್ಲ ಸೋರಿಹೋಯಿತು; ತನ್ನ ಹೆಮ್ಮೆಗೆ ತಳಬುಡವಿಲ್ಲೆಂದು ನಾಚಿಕೊಂಡನು. ಕಡೆಗೆ ಸಂಪ್ರದಾಯವನ್ನು ಪಾಲಿಸುವ ಸಲುವಾಗಿ, ಹಿಂದಿನ ದೊರೆಗಳಲ್ಲೊಬ್ಬನ ಪ್ರಶಸ್ತಿಯನ್ನು ಒರೆಸಿಹಾಕಿ, ಆ ಜಾಗದಲ್ಲಿ ತನ್ನ ಸ್ಮಾರಕವನ್ನು ಬರೆಯಿಸಿದನು. ನಿಜವಾಗಿ ಇದು ವಿಜಯವೇ?

ನಮ್ಮ ಜನಕ್ಕೆ ಈಗ ವೈರಾಗ್ಯ ಹೇಳುವುದರ ಆವಶ್ಯಕತೆಯಿಲ್ಲ. ನಿರಾಶಾಮಯ ಜೀವನವು ವೈರಾಗ್ಯದ ತಂದೆ. ಈ ಬದುಕು ಹಳಸಿ ಹೋಗಿದೆ. ಬಾಳುವುದಕ್ಕೆ ಪೌರುಷದ ದಾರಿ ಬೇಕು. ಪೌರುಷವನ್ನು ಸಾಧಿಸುವ ಜೀವನದ ಪ್ರಯೋಗ ನಡೆಯಬೇಕಾಗಿದೆ; ಅಂಥ ಜೀವನಗಳಿಗೆ ಪೌರುಷಸುಧೆಯನ್ನು ಕುಡಿಸುವ ಸಾಹಿತ್ಯ ಬೇಕು. ಅಂಥ ಸಾಹಿತ್ಯವನ್ನು ನಿರ್ಮಿಸುವ ಮಹಾಕವಿ ಬೇಕು. ನನಗೆ ಪುನರ್ಜನ್ಮವು ಪ್ರಾಪ್ತವಾದರೆ ನಾನು ಕರ್ನಾಟಕದಲ್ಲಿ ಹುಟ್ಟಿಬಂದು "ಪೌರುಷವಿಜಯ" ಎಂಬ ಮಹಾಕಾವ್ಯವನ್ನು ರಚಿಸುತ್ತೇನೆ. ಜೀವನವನ್ನೂ, ಜೀವವನ್ನೂ ಹೀರುವ ಯಮನನ್ನ ಸೋಲಿಸುವ ವೀರರಸವನ್ನು ಬಳಸುತ್ತೇನೆ ಹೊತ್ತು ಹೊರಟರೆ ಕೋಟಿ [illegible]ನ ಹುಟ್ಟಿಸಿ, ಕೋಟಿ ಕೊಲ್ಲುವ ಕೋಟಲೆಯನ್ನು ಕಳೆದೊಗೆ

ಯುವ ಅಮರತೆಯನ್ನು ನನ್ನ ಮಹಾಕಾವ್ಯದಲ್ಲಿ ಚಿತ್ರಿಸುತ್ತೇನೆ. ಸಾವಿರ ವರುಷಗಳ ಹಿಂದೆಯೇ ವೀರದಬ್ಬರವನ್ನು ಗುಡುಗುಡಿಸಿ ಬಿಟ್ಟ ನಾನು, ಇಂದಿನ ಜಗತ್ತಿನಲ್ಲಿ ಅದೆಂಥ ಕಾವ್ಯ ರಚಿಸೇನು? ನಾಡತಾಯಿಯು ತನ್ನ ಅಗ್ರಕವಿಯನ್ನು ಬೇಗನೆ ಕರೆಸಿಕೊಳ್ಳಲಿ ಕರೆದಾಗ ಬರುವೆನೆಂದು ನಿಮಗೆ ಮಾತು ಕೊಡುತ್ತೇನೆ. ಕರೆಸಿಕೊಳ್ಳುವುದು ನಿಮ್ಮ ಕೆಲಸ.

ಇಂತು— ನಿಮ್ಮ ಲಲಿತಾಲಂಕರಣ

**ಅಗ್ರಕವಿ ಪಂಪ.**

೨

# ಹರಿಹರನ ಭಕ್ತವಾಣಿ

ಪಂಪಾಪತಿಯ ಪ್ರತಿನಿಧಿಸ್ವರೂಪರಾದ ಕನ್ನಡಿಗರೇ,

ನಿಮ್ಮೊಡನೆ ಏಳೆಂಟುನೂರು ವರುಷಗಳ ದೀರ್ಘಾವಧಿಯನ್ನು ಕಳೆದ ಮೇಲೆ ನುಡಿಯಬಂದರೂ "ಮತ್ತಾವ ರಗಳೆ ತಂದೆನೆಂ"ದು ಬೇಸರಪಡುವಿರೆಂದು ನಾನು ತಿಳಿದಿಲ್ಲ. ಇಂದು ಕನ್ನಡಿಗರಿಗೆ ರಗಳೆಯ ನಿಜವಾದ ಅರ್ಥವು ಆದಂತೆ ತೋರುತ್ತದೆ. ಕನ್ನಡ ಮೇಧಾವಿಗಳು ಆದಿಕವಿ ಪಂಪನನ್ನು ಕವಿ ಕಾಳಿದಾಸನಲ್ಲದಿದ್ದರೂ ಕನ್ನಡ ಕಾಳಿದಾಸನೆಂದು ತೂಗಿ, ಅಂಥ ಆದಿ ಕವಿಯ ತೂಕಕ್ಕೆ ನನ್ನನ್ನು ನಿಲ್ಲಿಸಿದ್ದರಲ್ಲಿ ತುಸು ಹೆಚ್ಚು ಔದಾರ್ಯವೆಂದೇ ಎಣಿಸುತ್ತೇನೆ. ನನ್ನ ಕಾವ್ಯದಲ್ಲಿ ಮಯೂರನ ರೇಖೆಯೂ, ಕಾಳಿದಾಸನ ರಸವೃತ್ತಿಯೂ, ಬಾಣನ ಮೃದೂಕ್ತಿಯೂ, ಕೇಶಿರಾಜನ ಬಗೆಯೂ ನೆಲೆಸಲೆಂದು ನಾನು ಹಾರಯಿಸಿದ್ದು ನಿಜ; ಸುರತರುವಿನಂತೆಯೂ, ಸುಜನರ ಸಿರಿಯಂತೆಯೂ, ಸರೋಜದಂತೆಯೂ, ಸುಧೆಯಂತೆಯೂ, ಸುಧಾಕರ ಕಿರಣದಂತೆಯೂ ಹಂಪೆಯ ಹರಿದೇವನ ಕಾವ್ಯವು ಅಖಿಳ ಸೇವ್ಯವೆಂದು ಹೆಮ್ಮೆಪಟ್ಟುಕೊಂಡದ್ದೂ ನಿಜ; ನೀರಸರರಿವಂತೇನಿದು ತಾರಲೆಯೇ; ಬೀದಿವಾಡೇ, ನೆರವಿಯ ತುಮುಕೇ — ಎಂದು ಹೆಡೆಯೆತ್ತಿದ್ದೂ ನಿಜ. ಆದರೆ ವಿರೂಪಾಕ್ಷನ ಸಾಕ್ಷಾತ್ ಸುಪುತ್ರನಾದ ಹರಿಹರನು, ಮನುಜರ ಮೇಲೆಯೂ ಸಾವವರ ಮೇಲೆಯೂ ಕನಿಷ್ಠರ ಮೇಲೆಯೂ ಪದ್ಯ ರಚಿಸುವನೇ? "ಅಹರ್ನಿಶಂ ನೆನೆಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ" ಎಂಬ ಮಾತಿನಲ್ಲಿ ಹುದುಗಿರುವ ನನ್ನ ಕಾವ್ಯೋದ್ದೇಶವನ್ನು ನಿಮ್ಮೆಲ್ಲರ ನೆನಪಿಗೆ ತಂದುಕೊಡುತ್ತೇನೆ; ಆಗ ತಿಳಿಯುವುದು ನನ್ನ ಹೆಮ್ಮೆಗೊಂದು ಬೆಲೆಯಿದೆಯೆಂದು

ನಾನು ಭಕ್ತಜೀವಿ; ನನ್ನಲ್ಲಿರುವ ಭಕ್ತಿಯು ಭಯದಿಂದಲೇ ಹುಟ್ಟಿರಲಿ, ಕೃತಜ್ಞತೆಯಿಂದಲೇ ಹುಟ್ಟಿರಲಿ, ನನಗೆ "ಭಕ್ತಿಸುಖದಿಂದಿತರ

ಸುಖವದೆಲ್ಲಿಯದೆನಿಸಿದೆ' ಯಲ್ಲದೆ, "ಮುಕ್ತಿಪಥದಿಂದಧಿಕವಿದಕೆ ಪಡಿಯಿಲ್ಲೆ ನಿಸಿ"ದೆ. "ನರರಂ ಸೇವಿಪ, ಜೀಯ ಜೀಯೆನುತಮಿರ್ಪನೆಂದೊಡಂ.... ಬೇಡುತಿರ್ಪಿರವಂ ಸುಟ್ಟು, ಬಿಸುಟ್ಟು ಭಕ್ತಿಯೊಳಗೋಲಾಡಲ್ ಮನಂ-ದಂದ....ಶಂಕರನಂ ಶಾಶ್ವತನಂ ಕೃಪಾಜಲಧಿಯಂ ಕಂಡೆಂ ವಿರೂಪಾಕ್ಷನಂ" ಲೋಚನಯುಗ ನೀರೇರುವುದೂ, ಮೈಯೆಲ್ಲ ಅಂಕುರವೇರುವುದೂ, ನುಡಿ ಕಂಪವೇರುವುದೂ, ಉತ್ಸವ ತಲೆಗೇರುವುದೂ ಶ್ರೇಷ್ಠಭಕ್ತಿಯ ಲಕ್ಷಣಗಳೇನೋ ಸರಿ; ಆದರೆ ಅವು ಭಕ್ತಿಯ ಕೊನೆಯ ಬಿಂದುಗಳೇನಲ್ಲ. "ಪಳಿವ ಮುಳಿವ ಕಾಮಿಪ್ಪ ಕೋಪಿಪ್ಪ ಲೋಭಿಪ್ಪ ಅತ್ಯಂತ ಗರ್ವಿಪ ಮನಕ್ಕೆ" ಪರಮ ವೈರಾಗ್ಯವು ದಿವ್ಯ ಕೃಪೆಯಿಂದ ಪ್ರಾಪ್ತವಾಗಬೇಕು. ಆಗ ಭಕ್ತನು ಪಂಪಾಪುರದರಸನಿಗೆ ತನ್ನಿಷ್ಟ ದೈವತಕ್ಕೆ ಮಾರುಗೊಡುವನು; ಒತ್ತೆಗೊಡುವನು; ಸೂರೆಗೊಡುವನು; ಹರುಷದಿಂದ ಒಚ್ಚತಂಗೊಡುವನು; ಸಂತೋಷದಿಂದ ಒಪ್ಪುಗೊಡುವನು. ಆಮೇಲೆ, ಭಕ್ತನು ಕರೆಯದಿದ್ದರೂ ಒಡೆಯನು ಬಂದು ನೆಲೆಸುವನು; "ಓವ್ರೋ ಮಗನೆ ಬಂದೆಂ; ದಿಟಂ ಬಂದೆಂ; ನೊಂದಾ? ಬಳಲ್ದಾ? ಕರೆದಾ? ಕಂಡಾ! ಎನ್ನುತ್ತ ಅವಯವ ವನಿತಂ ಮುಟ್ಟುವನು; ಕೃಪೆಮಿಗೆ ನಲವಿಂ ನೋಡುವನು; ಶಿರದೊಳ್ ಕೈಯಿಟ್ಟು ಕೊಂಡಾಡುವನು" ಭಕ್ತನು ತನಗೆ ಲಭಿಸಿದ ಆ ದಿವ್ಯ ಸ್ಪರ್ಶ ವನ್ನೂ, ಆ ಅಮೃತ ಸ್ನೇಹವನ್ನೂ, ಆ ಕೃಪಾದೃಷ್ಟಿಯನ್ನೂ ಯಾವಾಗಲೂ ಕಾಪಾಡಿಕೊಂಡು ಹೋಗಲಿಕ್ಕೆ ಅವನು, ಸದಾ ತತ್ಪರನಾಗಿರುತ್ತಾನೆ; "ಬಿಡೆನೀಶಾ ನಿಮ್ಮ ಪಾದಾಬ್ಜವ"ನೆಂದು ದೃಢವಾಗಿ ನಿಶ್ಚಯಿಸುತ್ತಾನೆ; "ಸೀಳ್ದೊಡಂ ಪೋಳ್ದೊಡಂ ಪೊಯ್ದೊಡಂ ಬಿಡೆನಭವಾ" ಎಂದು ಗಟ್ಟಿ ಗೊಳ್ಳುತ್ತಾನೆ. ಭಕ್ತಿಯ ಕಾವು ಇಷ್ಟರವರೆಗೆ ಭಕ್ತನನ್ನು ಕರಗಿಸುವಂತೆ, ಸ್ವಾಮಿಯನ್ನೂ ಕರಗಿಸಲು ತೊಡಗಿರುತ್ತದೆ. ಸ್ವಾಮಿಯು ಕರಗಿ, ಭಕ್ತ ನೊಡನೆ ಬೆಸುಗೆಗೊಂಡರೆ ಅಲ್ಲಿ ಅಪರಬಿಂದು; ಅಲ್ಲಿಯೇ ಜ್ಞಾನಗಂಗೆ ಭಕ್ತಿಯಮುನೆಯರ ಸಂಗಮಸ್ಥಳ; ಅಚಲ ಅದ್ವೈತ ಸ್ವಾಮಿಯನ್ನು ದರ್ಶಿಸಿದ ಭಕ್ತನು ಕಣ್ಣು ಅರಳಿಸಿದಾಗಳೆಲ್ಲ ಪಂಪಾಪುರದರಸನೇ ಕಂಗೊಳಿ ಸುತ್ತಾನೆ; ಕಣ್ಣು ಹೊರಳಿಸಿದಲ್ಲೆಲ್ಲ ಹಂಪೆಯಾಳ್ದನೇ ಗೋಚರಿಸುತ್ತಾನೆ. ಅವನ ಮಾತೆಲ್ಲ ಜ್ಯೋತಿ; ಪಾಡೆಲ್ಲ ಹಾಡು; ಜೀವನವೆಲ್ಲವೂ ಸಂಜೀವನ

ುಃಖಮಯ ಜಗತ್ತೂ ಶಿವನ ಕುರುಹೇ; ಭಯಾನಕ ಜೀವನವೂ ಶಿವನ ೀಲೆಯೇ. ತೊಂಬತ್ತರ ಮುಪ್ಪನ್ನು ಕಂಡ ಭಕ್ತವಾಣಿಯು-ಶಿವಭಕ್ತಿ ೀಪಾನದಂತೆ ತೆರೆಗಳೆಂದೂ, ಶಿವನಲ್ಲದಾರು ಇಲ್ಲೆಂಬಂತೆ ತಲೆ ನಡಗು ಂದೂ, ಭವಿಗಳಂ ನೋಡೆನೆಂಬಂತೆ ಕಣ್ಣಿವೆ ಮುಗಿವವೆಂದೂ ನುಡಿಯು ದೆ. ಬೆಂಬಳಿವಿಡಿದಾಡುತ್ತಿರುವ ಜಡೆಗಳುಳ್ಳ ಮುಡಿಯೊಳ್ ಸುರನದಿ ಳ್ಕಾಡುವ, ತಡಿಯೊಳ್ ಶಶಿಕಳೆಯಲ್ಲಾಡುತ್ತಿರುವ ಶಿವನು ಎಲ್ಲೆಲ್ಲಿಯೂ ಕ್ತಕವಿಯ ಕಣ್ಣಿಗಲ್ಲದೆ ಇನ್ನಾರಿಗೆ ಗೋಚರಿಸುವನು ?

ಕವಿಯಾದವನು ತನ್ನಿಷ್ಟ ದೈವತವನ್ನು ಬೆಸಗೆಯ್ದು "ಗುರುವಿಂ ದ್ಧನಾದೆಂ; ಗುರುವಿನ ಕೃಪೆಯಿಂದಂ ಜಗತ್ಪೂಜ್ಯನಾದೆಂ; ಗುರುವಿಂ ಷ್ಕಾಮನಾದೆಂ; ಘನತರ ಗುರುವಿಂ ಶಾಂತಿಸಂಪನ್ನನಾದೆಂ; ಗುರುವಿಂ ರ್ವಜ್ಞನಾದೆಂ" ಎಂದು ಧನ್ಯೋಕ್ತಿಗಳನ್ನು ವೈಮರೆತು ಸುರಿಸುತ್ತಿರ ೇಕು. ಆಗದು ಕಾವ್ಯವಾಣಿಯೆನಿಸುತ್ತದೆ. ಸಾರ್ಥಕ ಸಾಹಿತ್ಯವೆನಿಸುತ್ತದೆ. ಇವನಂ ನೋಡಿದ ಕಣ್ಗೆ ಮತ್ತೆ ಕೆಲವುಂ ರೂಪೇ ? ವಿರೂಪಾಕ್ಷನೆಂಬ ನಂ ಮುಟ್ಟಿದ ಕೈಗೆ ಮತ್ತೆ ಕೆಲವುಂ ಮೆಯ್ಯೇ ?'' ಎನ್ನುವ ದಿವ್ಯವನ್ನು ಾಣುವ ದೃಷ್ಟಿಯೂ ಅವ್ಯಕ್ತವನ್ನು ಮುಟ್ಟುವ ಸ್ಪರ್ಶವೂ ಕವಿಯಾದವನಿಗೆ ಳಕೆಯ ಮಾತಾಗಬೇಕು. ಅಂಥ ಜೀವನು ಮಹಾಕವಿ; ಅಂಥವನ ೀವನ ಮಹಾಕಾವ್ಯ. ಅವನು "ಮುಟ್ಟಿದ ಮರಂ ಮನುಜರಾಗಿ ನಡೆವವು ೆಲವು; ಮೆಟ್ಟಿದಾ ಪ್ರಾಣಿ ಸ್ವರ್ಗಕೆ ನಡೆವವು ಕೆಲವು. ಶಶಿರವಿಗಳಂತೆ ೆಳಬೆಳಗುತಿರ್ದನಂ ನೋಡ; ಉಸುರಲಿಲ್ಲದ ಪರಬ್ರಹ್ಮವಾದಂ ನೋಡ." ಮಹಾಕವಿಗೆ, ತನ್ನ ಕೃತಿಯನ್ನು ರಚಿಸುವಲ್ಲಿ "ಭಾರತಿಯೆನಗನುಕೂಲೆ ಾಗದಿರಲಣ್ಮುವಳೇ ?'' ಆತ್ಮವಿಶ್ವಾಸವು ಅಚ್ಚಳಿಯದೆ ಅಳವಡುತ್ತದೆ.

ಜಗದೀಶ್ವರನನ್ನು ಕಂಡ ಜೀವನಿಗೆ ಜಗತ್ತೇ ಈಶ್ವರ ಸ್ವರೂಪದಿಂದ ರ್ಶನ ಕೊಡುತ್ತದೆ. ಜಡಕ್ಕೆ ಜಡವಾದ ಬೆಟ್ಟಗಿರಿಗಳನ್ನೂ ಶಿವಸ್ವರೂಪ ಲ್ಲಿಯೇ ಅವನು ಕಾಣುವನೆಂದರೆ ಅದರಲ್ಲಿ ಆಶ್ಚರ್ಯವೇನು ?" "ಗಿರಿ ಖರಂ ಮುಖಂ ಮರದೊಳೊದ್ದುವ ಬೀಳಲೆ ತಜ್ಜಟಾಳಿ; ವಿಸ್ತರವರ ಂಡ ಶೈಲಮೆ ವಿಕೀರ್ಣ ಭುಜಾವಳಿ; ವಾದ್ಯ ಸಂಕುಳಂ ಕರಿಕುಳ

ಬ್ರಂಹ್ಮಿತಂ, ಸಿಂಹರವಂಗಳವಾಗೆ ಸಂತತಂ ಸ್ಮರರಿಪು ನಾಟ್ಯದೊಳ್ ನೆಲಸಿ ನಿಂದವೊಲ್ .... ಭೂರಿಭೂಧರಂ" ಒಪ್ಪುವದು. ಆ ಕವಿಯ ಕಣ್ಣಿಗೆ ಕಂಗೊಳಿಸಿದ ತುಂಗಭದ್ರೆ ಶಿವನ ಕೀರ್ತಿಯಂತೆ ಭುವನ ಭರಿತವಾಗಿಯೂ, ಪಾರ್ವತೀವಿಳಾಸದಂತೆ ತೀರದೊಪ್ಪುಳ್ಳದ್ದಾಗಿಯೂ ಅಮರಾವತಿಯಂತೆ ಅನಿಮಿಷಪ್ರಕರವುಳ್ಳದ್ದಾಗಿಯೂ, ಕರೆಗೊರಲಿನಂತೆ ವಿಷಭಂಗವುಳ್ಳದ್ದಾಗಿಯೂ, ಗಗನತಳದಂತೆ ವಕ್ರಗತಿಯುಳ್ಳದ್ದಾಗಿಯೂ ತೋರುವದು. ಅಖಿಲ ವಿಶ್ವದ ಮುಂದೆ ನಿಂತ ಆಪನ ದೃಷ್ಟಿಯು---"ಪೊಸಜಡೆಯೊಳ್ ತೊಡಂಕಿ ನೊಸಲೊಳ್ ನಡೆಪಾಡಿ, ಕಪೋಲ್ ಭಾಗದೊಳ್ ಪಸರಿಸಿ ಲೋಚನಂಗಳೊಳ್ ಅಮರ್ಚಿ, ತದಾಸ್ಯದೊಳ್ ಒಂದಿ, ಕಂಠದೊಳ್ ಮಿಸುಗಿ, ಭುಜಾಗ್ರದೊಳ್ ತೊಳಗಿ, ವಕ್ಷದೊಳ್ ಅಳ್ದು, ಕರಾಂಗಕೊಳ್ ವಿರಾಜಿಸಿ ಪದದಲ್ಲಿ ಬೀಳುವ"ದೆಂದರೆ ಆ ಕಣ್ಣು ಯಾರನ್ನು ಕಾಡಿರಬೇಕು; ಏನನ್ನು ಕಾಣುತ್ತಿರಬೇಕು ?

ಕಾವ್ಯ ರಚಿಸುವಾಗ ಕವಿಯು ಯಾವ ಮಟ್ಟಕ್ಕೇರುವನೋ ಅದೇ ಮಟ್ಟದಲ್ಲಿ ತನ್ನ ಯಾವಜ್ಜೀವನವೂ ನಿಲ್ಲುವಂತೆ ಅವನು ಸಾಧಿಸಬೇಕಾಗುವದು; ಅವನು ಕವಿತೆ ಕಾಣುವಾಗ ತೆರೆದ ದೃಷ್ಟಿಯಿಂದ ಸಮಸ್ತ ಪ್ರಪಂಚವನ್ನೇ ಕಾಣುವದಕ್ಕೆ ಹವಣಿಸಬೇಕು. ಬಿಡಿಯಾಗಿ ಬರುವ ರಸನಿಮಿಷಗಳನ್ನು ಇಡಿಯಾಗಿ ತಂದುಕೊಳ್ಳುವ ರಸಜೀವನವನ್ನು ಗಳಿಸಬೇಕು. ಅಂಥವನು ನೂರಿಪ್ಪತ್ತು ಶರಣರ ರಗಳೆಗಳನ್ನೇ ಅಲ್ಲ; ಸಾವಿರಾರು–ಲಕ್ಷಾವಧಿ ಶರಣರ ರಗಳೆಗಳನ್ನು ಬರೆಯಬಹುದು ಅವನು ಬರೆಯಲಿಕ್ಕಾಗದಷ್ಟು ಶರಣ-ಜೀವನವನ್ನು ಜಗತ್ತಿನಲ್ಲಿ ಕಾಣಬಹುದು. ಅವನ ಜೀವನವೇ ಒಂದು ಸುಪ್ತವಾದ ಮಹಾಕಾವ್ಯವಾಗಬಹುದು ಅವನು ನೂರು ಮಹಾಭಾರತಗಳನ್ನು ಬರೆದೊಟ್ಟಿದರೂ, ಅಪ್ರಕಟಿತ ಕಾವ್ಯಭಾಂಡಾರವು ಅವನಂತರಂಗದಲ್ಲಿ ಹಿಮಾಲಯದಂತೆ ನೆಲೆಯಾಗಿ ನಿಂತಿರುತ್ತದೆ. ಅವನಿಗೆ ರಗಳೆಯೆಂದರೆ ಜೊಳ್ಳಲ್ಲ; ಪ್ರೌಢಕಾವ್ಯವೆಂದರೆ ಅಗಾಧವಲ್ಲ ಅವನು ಶೈಲಿಗೆ ಸೆಲೆ; ವೃತ್ತಗಳು ಅವನ ಅನುವರ್ತಿ; ನುಡಿಯ ಕಟ್ಟು ಅವನಿಗೆ ಊಳಿಗದಾಳು. ಆ ಕವಿಯು ಕವಿಯಲ್ಲ; ದೇವ ಕವಿಯ ಲೇಖನಿ. ಭಾವಕ್ಕೆ ತವರಾದ, ಶೈಲಿಯ ನಿಲಯವಾದ, ಛಂದಸ್ಸಿನ ನೆಲೆಯಾದ, ಚಾತುರ್ಯದ ಸೀಮೆ

ಾದ ದೇವ ಕವಿಯ ಕಾವ್ಯವನ್ನು ಬರೆಯುವ ಲೇಖನಿಯಾಗುವ ಭಾಗ್ಯವು ವ್ಯಕ್ತಿಗೆ ಬರುವುದೇನು ಸಣ್ಣ ಮಾತೇ ?

ಜೀವನವು ಹಿರಿಯದಾಗದಿದ್ದರೆ ಸಾಹಿತ್ಯವು ಹಿರಿದಾಗದು. ಕಾವ್ಯ ್ಯವು ಕಾವ್ಯವಸ್ತುವಾಗುವ ಸಾಹಸದಲ್ಲಿ ತೊಡಗಬೇಕು. ಕಾವ್ಯದ ಿನಲ್ಲಿ ಕಾಣುವ ಸೊಬಗನ್ನು ಕವಿಯು ಬಾಳಿನಲ್ಲಿ ಬೆಳಗಿಸಿಕೊಳ್ಳಬೇಕು; ವ್ಯದಲ್ಲಿಯ ಕಲ್ಪನೆಯ ಮಾಧುರ್ಯವನ್ನು ಜೀವನದಲ್ಲಿ ಸವಿಯಬೇಕು; ನ ಮನೋರಾಜ್ಯದ ಬದುಕು, ಹೊರಜೀವನದಲ್ಲಿ ಅರಳಬೇಕು; ಂದದ ಕ್ಷಣಗಳು ಅವಿರತವಾಗಬೇಕು ಆದರೆ ಅದಕ್ಕೇನು ಉಪಾಯ ? ಮ್ಮಡಿಯ ಕೆರ್ಪಂ ಪಿಡಿದವನ ಚರಣವಾರ ಮುಕುಟದೊಳು ಬೀಳದು ವಾ ?" ಎಂಬ ಮಾತಿನಲ್ಲಿ ಆ ಉಪಾಯವು ತುಂಬಿ ತುಳುಕುತ್ತಿದೆ. ಆ ಾಬಂಧುವಿನ ಸಮೀಪದ ಆಪ್ತರು ನಾವಾಗದಿದ್ದರೆ, ಆ ಪುರಾತನ ಧುವಿನ ಹತ್ತುಗಡೆಯವರು ನಾವಾಗದಿದ್ದರೆ, ನಾವು ಯಾವ ಕೀರ್ತಿ ಸಬಲ್ಲೆವು ? ಆ ಸರ್ವ ಜೀವಬಂಧುವನ್ನೂ, ಆ ಪರಮಾರ್ಥ ಬಂಧು ನ್ನೂ ಬಿಟ್ಟರೆ ನಮಗಿನ್ನಾರು ಗತಿ ? ಆ ಸುಖಪ್ರದ ಬಂಧುವಿಲ್ಲದೆ, ಆ ಾಥ ಬಂಧುವಿಲ್ಲದೆ ಈ ಭೂಮಿಯಲ್ಲಿ ಬಳಕೊಳ್ಳುವದೇನು ? ಆ ಮಿತ್ತ ಬಂಧುವನ್ನು ಮರೆದು, ಆ ಮನೋಹರ ಬಂಧುವನ್ನು ತೊರೆದು ರು ವರುಷ ಕಳೆಯುವುದು ಏತಕ್ಕಾಗಿ ? ಆ ಅತ್ಯಪೂರ್ವ ಬಂಧುವಿನ ಬಂಧವಿಲ್ಲದೆ, ಸಕಲೈಕ ಚೇತನ ಸುಬಂಧುವಿನ ಸಂಬಂಧವಿಲ್ಲದೆ ಒಂದು ಸಿರನ್ನಾದರೂ ಬಿಡಬಲ್ಲೆವೇ ?

" ನೋಡದ ಕಣ್ಣೇಕೆ, ಸಲೆ ಪಾಡದ ಬಾಯದು ಏಕೆ ? " ಎಂಬ ವವು ಮನುಷ್ಯನಾದವನಲ್ಲಿ ಸುಳಿಯದೇ ಇದ್ದರೆ ಅವನು ಪೌರುಷ ಕರ್ಮ ನ್ನೆಂತು ಆಚರಿಸುವನು ? ಹೊಟ್ಟೆಯ ಪಾಡಿಗಾಗಿ, ಮಡದಿ-ಮಕ್ಕಳ ೋಷಣೆಗಾಗಿ ಸಿಕ್ಕವರ ಸೇವೆಗೆ ಸಿದ್ಧನಾದ ಮನುಷ್ಯನಿಗೆ ಆಳ್ತನದ ಭಾವವು ಬೇರೂರಿದೆ. ಆ ಬೇರು ಕಿತ್ತೊಗೆಯಲಿಕ್ಕೂ ಕರುಣಾಕರನ ಯೆಯೇ ಬೇಕು " ಪೋಗೆನೆ ಪೋಪ, ಬಾರೆಲವೊ ಬಾರೆನೆ, ಜೀಯ ! ಾದವೆಂದು ಬೆಳ್ಳಾಗುತ ಬರ್ಪ " ಊಳಿಗತನವನ್ನೂ, " ಮಾಣೆಲವೊ !

ಸುಮ್ಮನಿರೆಂದೊಡೆ ಸುಮ್ಮನಿರ್ಪ, ಮತ್ತಾಗಳೇ ಝುಂಕಿಸಲ್ ನಡುಗಿ ಬೀಳುವ” ಪುಕ್ಕತನವನ್ನು ಬೆಳೆಸುತ್ತಿರುವ ಕಷ್ಟವೃತ್ತಿಯಲ್ಲಿ ಮೈಯುಂಡವನು “ಕರ್ತಾರಂ ನೀನೆ, ಭರ್ತಾರಂ ನೀನೆ, ಹರ್ತಾರಂ ನೀನೆ” ಎನ್ನುವ ಬಗೆಯಾದರೂ ಹೇಗೆ? “ಸಲ್ಲದು ಸುಡು ಸುಡು ಛೀ ಮನೋವೃತ್ತಿ”ಯು ನೆಂದು ದೃಢಪಡಿಸಿ ನಿಲ್ಲಬಾರದೇ? ಒಮ್ಮೆಯಾದರೂ “ನಡೆ ತಂದೆನ್ನಯ ಕಣ್ಗಳಲ್ಲಿರು ವಿರೂಪಾಕ್ಷಾ! ಬಿಡದಂತೆನ್ನಯ ಜಿಹ್ವೆಯಲ್ಲಿರು ವಿರೂಪಾಕ್ಷಾ! ಎಡೆಗೊಂಡೆನ್ನಯ ಚಿತ್ತದಲ್ಲಿರು ವಿರೂಪಾಕ್ಷಾ! ನಿಡಿದಂತೆನ್ನೊಳೆ ಕೂಡಿ ನಿಲ್ಲೆಲೆ ವಿರೂಪಾಕ್ಷಾ!” ಎಂದು ಪ್ರಾರ್ಥಿಸಿದರೆ, ಅದು ವ್ಯರ್ಥವಾಗದು; ಆತನ ನಿಲಯವು ಒಮ್ಮಾನೊಮ್ಮೆ ದೇವನಿಲಯವಾಗದಿರದು. ಅಲ್ಲಿ ನೆಲೆನಿಂತ ದೇವನು “ನಿಂದಲ್ಲಿ ನಿಂದಪೆಂ; ಬಂದಲ್ಲಿ ಬಂದಪೆಂ. ಪಿಡಿದುದಂ ಪಿಡಿದಪೆಂ; ಬಿಟ್ಟುದಂ ಬಿಟ್ಟಪೆಂ” ಎಂದು ಕೈವಾರಿಯಾಗಬರುವನು. ಈ ನಿಲವಿಗೆ ಬರದಿದ್ದರೆ, ಕವಿಗೂ ಸಾರ್ಥಕವಿಲ್ಲ; ವಾಣಿಗೂ ಸಾರ್ಥಕವಿಲ್ಲ. ಈ ಮಟ್ಟಕ್ಕೇರದ ಭಕ್ತನಿಗೂ ಸಾಫಲ್ಯವಿಲ್ಲ; ಅವನ ಬಾಳಿಗೂ ಬೆಳಸಿಲ್ಲ.

ತನ್ನ ಸಂಕಲೆಗಳನ್ನು ಬಿಚ್ಚಲಾಗದವನು, ಅನ್ಯರನ್ನು ಹೇಗೆ ಬಿಡುಗಡೆ ಮಾಡುವನು? ನುಡಿದಾಯಿಯನ್ನು ಹೇಗೆ ನಡೆದಾಡಿಸುವನು? ಪ್ರಪಂಚದ ಪ್ರಚಂಡ ಭಾರವನ್ನು ಹೊತ್ತು ಏದುತ್ತಿರುವ ನರಕುನ್ನಿಯು, ಕಾವ್ಯವನಿತೆಯನ್ನು ಅದೆಂತು ಹಗುರಗೊಳಿಸಬಲ್ಲನು? ಅದನ್ನೋದಿದ ಓದುಗರ ಎದೆಯ ಭಾರವೇನು ಇಳಿದೀತು? ತಾನುಣ್ಣದಿದ್ದರೆ ಅದರ ಸವಿಯನ್ನೇನು ಉಸುರುವನು?

ಹಂಪೆಯರಸನ ಕುಮಾರನಾದರೂ ಸಿತಗನಾದ ನಾನು, ತಿಳಿಪಿದ ನಲ್ನುಡಿಗಳಿವು ಗಳಪಿದ ಮುಳ್ನುಡಿಗಳೆನಿಸಿದರೆ, ರಗಳೆಯ ಕವಿಯೆಂಬ ಮರೆತ ಬಿರುದನ್ನು ಮತ್ತೆ ತೊಡಿಸಿದರೆ ನಾನೇನು ಮಾಡುವೆನು? ಸತ್ಯವು ಪ್ರಿಯವಾಗಿರಬೇಕಾದರೂ ಅದು ಕಠೋರವಾಗಿರುವದರಿಂದ ಸೈರಿಸಬೇಕು; ಶಾಂತ ಚಿತ್ತದಿಂದ ಇನ್ನೊಮ್ಮೆ ಆಲಿಸಬೇಕು.

ಇಂತು—ಹಂಪೆಯರಸನ ಕುಮಾರ

ಸಿತಗ–ಹರಿಹರ

೩

# ರಾಘವಾಂಕನ ಅಸ್ಪೃಶ್ಯತೆ

ಡನಾಡಿನ ಉದಯೋನ್ಮುಖ ತರುಣರೇ,

ಎಂಟು ನೂರು ವರುಷಗಳ ಹಿಂದೆಯೇ ಅಸ್ಪೃಶ್ಯ ನಿವಾರಣೆಯು
ಾಮಯ ಕಾರ್ಯಗಂಗೆಯು ಧಾರ್ಮಿಕವಾಗಿ—ಕನ್ನಡನಾಡಿನ ಮೇಲೆ
ಹಿಸಿ ಹೋದರೂ ಆ ಪ್ರಶ್ನೆಯಿನ್ನೂ ಜೀವಂತವಾಗಿರುವುದನ್ನು ಕಂಡು
ಕರಿಸುತ್ತೇನೆ. ನಾಡಹೃದಯವನ್ನು ಪುನೀತಗೊಳಿಸಿ ಹೋದ ಶರಣ
ಗಳಿಯ ಅಮೃತಪ್ರವಾಹವು ಇಂದು ಬತ್ತಿ ಹೋದಂತಿದ್ದರೂ—ನಿತ್ಯವೂ
ೀನವ ಜಲದಿಂದ ನಾಡಿನ ಅಭಿಷೇಕಗೈಯುವ ತುಂಗಭದ್ರೆ ಬತ್ತಿ
ಳೆಯೇ? ಒಮ್ಮೆ ಕಂಡ ಜೀವರ ಭವವೃಜದ ಬೆಂಬಡಿಗೆ, ಪಾತಕ
ಟಿಯಾ ಕತ್ತಿ ಅಲ್ಲವೇ ಅವಳು? ದುಷ್ಕರ್ಮಗಳಿಗೆ ಕೊರಳ-ಕತ್ತರಿ,
ಸ್ತ ರೋಗಗಳಿಗೊಡ್ಡಿದ ಅಲಗ ಎನಿಸಿಲ್ಲವೇ ತುಂಗಭದ್ರೆ? ಅಜ್ಞಾನ
ು ನಡುದಲೆಯ ಕರಗಸವೂ ಮಲೆವ ಮಾಯೆಯ ಬಸುರೊಡೆಯುವಂತೆ
ೀಯ್ವ ಶೂಲವೂ ಉಳಿದ ದುರಿತಗಳನ್ನು ಉರುಹಿ ಸುಡುವ ಕಿಚ್ಚೂ
ುವ ತುಂಗಭದ್ರೆಯನ್ನು ಮರೆಯುವರೇ? ತುಂಗಭದ್ರೆಯನ್ನು ಮರೆತರೆ
ಪೆಯೂ, ಹಂಪೆಯನ್ನು ಕಡೆಗಣಿಸಿದರೆ ವಿರೂಪಾಕ್ಷದೇವರೂ ಅಸ್ಪೃಶ್ಯರೇ
ದೇವರನ್ನು ಸಹ ಅಸ್ಪೃಶ್ಯರನ್ನಾಗಿ ಮಾಡುವ ಮಡಿವಂತರಾದ
ಶ್ರೇಷ್ಠರಿರುವಾಗ ಪಾಪ! ಬಡಪಾಯಿಗಳಾದ ದಲಿತ ಜನರ
ೀನು?

"ಹರನೆಂಬುದೇ ಸತ್ಯ; ಸತ್ಯವೆಂಬುದೇ ಹರನು" ಎಂಬ ಶ್ರುತಿವಾಕ್ಯ
ಆಧರಿಸಿಯೇ ನಾನು ಅರಿತು ಹರಿಶ್ಚಂದ್ರನ ಪುಣ್ಯಕಥೆಯನ್ನು ಕಾವ್ಯ
ಿಯಲ್ಲಿ ಸಾರುವ ಧೈರ್ಯಮಾಡಿದ್ದು. ಹರಿಶ್ಚಂದ್ರನಂಥ ಪುಣ್ಯಶ್ಲೋಕನ
ನೂ ಕಾವ್ಯಸಮಾಜದಲ್ಲಿ ಅಸ್ಪೃಶ್ಯವಾಗಿತ್ತು. 'ಹುಸಿಯೇ ಹೊಲೆ'
ದು ಡಂಗುರಿಸಿದ ನಾನು ಸಂಪ್ರದಾಯ ಶರಣನಾಗದೆ—ಸತ್ಯವೆಂಬ

ಶಿವನನ್ನು ಆರಾಧಿಸಿ ಸಿದ್ಧಿ ಪಡೆದ ಹರಿಶ್ಚಂದ್ರ ನರಪತಿಯನ್ನ 'ವೇದ-ಪ್ರಮಾಣಪುರುಷ'ನೆಂದೂ ಆತನ ಪೊಗಳ್ದು ಜನ ಬದುಕಬೇಕೆಂದೂ ಮುಂದಡಿಯಿಟ್ಟು ಸಾಗಿದೆ. "ಹುಸಿಯೇ ಹೊಲೆ"ಯೆಂದಷ್ಟೇ ಹೇಳಿಬಿಡದೆ "ಅತಿ ಹುಸಿವನತಿ ಹೊಲೆಯ"ನೆಂದೂ, ಹುಸಿಯದಿಹ ಹೊಲೆಯನುನ್ನತ ಯತಿವರ"ನೆಂದೂ ಬೊಬ್ಬಿರಿದೆ; "ಹುಸಿದು ಮಾಡುವ ಮಹಾಯಜ್ಞ ಶತವೈದೆ ಪಂಚಪಾತಕವೆಂದೂ, ಸತ್ಯವೆರಸಿದ ಅನ್ಯಾಯವದು ಲಿಂಗಾ-ರ್ಚನೆ"ಯೆಂದೂ ಸಾಂಪ್ರದಾಯಿಕರ ಕೈಗೆ ಕನ್ನಡಿ ಕೊಟ್ಟೆ. ಇಷ್ಟೇ ಅಲ್ಲ, "ಅನೃತವರಿಯದ ಹೊಲೆಯನಂ ನೆನೆಯೆ ಪುಣ್ಯ; ಘನಸತ್ಯವೇ ಜೀವ ವೆಂದಿರ್ದ ಹೊಲೆಯನ ಸೇವೆ ಗುರುಸೇವೆ" ಎಂಬ ಕಿಡಿನುಡಿಗಳನ್ನು ಉಗುಳಿದೆ. ಅದರೇನು? ಹತ್ತು ಅಂದರೆ, ಎತ್ತಿಗಂದರೆಂದೂ, ನೂರು ಅಂದರೆ ಹೋರಿಗೆಂದರೆಂದೂ ತಿಳುಕೊಳ್ಳುವ ಸಹಜ ಸುಮ್ಮಾನಿಗಳಿಗೆ ಯಾವ ಮಾತಿನಿಂದ ಯಾವ ಪ್ರಯೋಜನ? "ಅತಿಕೋಪ, ಬದ್ಧದ್ವೇಷ, ಅನಿಮಿತ್ತ ವೈರ" ಇವು ಹೊಲೆತನದ ತಂದೆ-ತಾಯಿಯೆಂದು ಪರ್ಯಾಯ ದಿಂದ ಹೇಳಿ ನೋಡಿದೆ; "ಅವು ಮುನಿಗಳಿಗೆ ಅಂಟಿಕೊಳ್ಳುವ ಹೊಲೆತನದ ಪಾತಕವೆಂದು ನನ್ನ ಕಣ್ಣು ನನ್ನ ಬೊಟ್ಟನ್ನೇ ತುರುಕುವ ಪ್ರಯತ್ನ ಮಾಡಿದರು. ಅದಕ್ಕೆ ಸತ್ಯತರ ಕೀರ್ತಿಕೇತುವಾದ ಹರಿಶ್ಚಂದ್ರ ನರವರ ನೊಡನೆ ಮಾತಂಗಿಯರು ನಡೆಸಿದ ಸಂಭಾಷಣೆ ಬೆಳೆಸಬೇಕಾಯ್ತು. ಗಾನಗಾರ್ತಿಯರಾದ ಹೊಲೆವೆಣ್ಣುಗಳಿಗೆ ಹರಿಶ್ಚಂದ್ರ ಮಹಾರಾಜನು ಒಲಿದು, ಮನವುಕ್ಕಿ ಸರ್ವಾಭರಣಗಳನ್ನು ತೆಗೆದಿತ್ತನು. "ಸಮಯಕ್ಕೆ ತಕ್ಕ ದಾನವಿದಲ್ಲ"ವೆಂದು ಹೊಲೆವೆಣ್ಣುಗಳು ನುಡಿದು, ಈ ಬಿಸಿಲುಬೇಗೆಯಲ್ಲಿ "ನಿನ್ನ ಮುತ್ತಿನ ಸತ್ತಿಗೆಯನ್ನಿತ್ತು ಸಲಹು" ಎಂದರು. "ತವಿಲು, ಎಡರು, ಬಡತನ, ರೋಗ, ಅಪಕೀರ್ತಿ, ಪರಿಭವಭಯ" ಮೊದಲಾದವು ಗಳನ್ನು ಕಳೆಯುವ ನೆರಳು ಕೊಡುವ ಸತ್ತಿಗೆಯನ್ನು ಹೇಗೆ ಕೊಡಬೇಕು?" ಎಂದು ರಾಜನು ಸತ್ತಿಗೆಯ ಮೇಲೆ ರವಿಕುಲದ ಪಾರಂಪರ್ಯವನ್ನು ಸ್ಥಾಪಿಸಿದನು. "ಸತ್ತಿಗೆಯೆಂದರೆ ಸತಿ, ತಂದೆ, ದೈವ, ತಾಯಿ, ಚತುರಂಗ ಬಲ ಎಲ್ಲವೂ ಅದೇ. ಹೀಗಿರುವಾಗ ಬೇಡುವವರು ಅತಿ ಮರುಳರೆನಿಸುವ ದಿಲ್ಲವೇ?" ಎಂದು ಪಾರಾಗಲೆತ್ನಿಸಿದ ರಾಜನಿಗೆ—"ಹಾಗಿದ್ದರೆ ಸತ್ತಿಗೆ

ಬೇಡ; ನೀನೆಮಗೆ ವಲ್ಲಭನಾಗು" ಎಂದು ಕೇಳಿಕೊಂಡರು. "ಸೂರ್ಯ ಕುಲದ ರಾಯರ್ಗೆ–ಸರಿಸಮಾನರಾದ ಒರೆದೊರೆಯೆನಿಸಿ ಕನ್ನಿಕೆಯರನ್ನು ಕೊಡುವ ಭೂಪರೇ ಇಲ್ಲದಿರುವಾಗ, ಹೊಲತಿಯರು ಬಂದು ಸತಿಯು ರಾಗುವೆವೆಂದು ನುಡಿಯುವುದು ಕಾಲಗುಣವೋ—ನಿಂದ ನೆಲದ ಗುಣವೋ ನೋಡು! ನೋಡು!" ಎಂದು ಅವನೀಶನು ಕಡುಮುಳಿದು ಕೋಪಿಸುವನು. ಮುಳಿದು ಕೋಪಿಸಿದಾಗಲೇ ರಾಜನು ಅರ್ಧ ಸೋತಂತಾಯಿತಾದರೂ, ಕ್ಷತ್ರಿಯರಿಗೆ ಮುಳಿಸು, ಕೋಪ ಅನಿವಾರ್ಯವಾದ್ದರಿಂದ ಕ್ಷಮ್ಯವೆನ್ನ ಬಹುದು. "ಕೆಚ್ಚಲಮಾಂಸದೊಳಗಿಂದ ಪಾವನಕ್ಷೀರವೂ, ಜೇನುಹುಳು ಗಳಿಂದ ಕೂಡಿಸಲ್ಪಟ್ಟ ಮಧುವೂ ಗ್ರಾಹ್ಯವಾಗಿರುವಾಗ ನಮ್ಮ ರೂಪು ಜವ್ವನಗಳಿರಲು ಕುಲದ ಮಾತೇಕೆ?" ಎಂದು ಧೈರ್ಯಗೊಟ್ಟು ಕೇಳಿಯೇ ಬಿಟ್ಟರು. "ನೀವು ಬಚ್ಚಲನೀರಿನಂತೆ, ನಾಯಮೊಲೆಯ ಹಾಲಿನಂತೆ ಪ್ರೇತವನದೊಳಗೆ ಬೆಳೆದ ಹೂವಿನಂತೆ—ನೀವು ಹೊಲತಿಯರಾಗಿರುವಾಗ ನಿಮ್ಮ ಪ್ರಾಯ, ರೂಪು, ಗಾಡಿ ಇವು ಏತಕ್ಕೆ ಒಪ್ಪಾಗುವವು?"—ಎಂದು ರಾಜನು ತಿರಸ್ಕರಿಸಿದ್ದಕ್ಕೆ—"ಹಾಡನು ಒಲಿಸಿದಾಲಿಸಿದ ಕಿವಿಗೆ ಹೊಲೆ ಯಿಲ್ಲ; ಮಾತಾಡಿ ಹೊಗಳಿದ ಬಾಯಿಗೆ ಹೊಲೆಯಿಲ್ಲ; ರೂಪ ನೆರೆನೋಡಿದ ವಿಲೋಚನಕೆ ಹೊಲೆಯಿಲ್ಲ; ಮೆಯ್ಮುಡಿಗಳಿಂ ಸುಳಿವ ತಂಗಾಳಿಯಿಂದ ತೀಡುವ ಸುಗಂಧವನ್ನು ವಾಸಿಸಿದ ನಾಸಿಕಕೆ ನಾಡೆ ಹೊಲೆಯಿಲ್ಲ. ಸೋಂಕಿಂಗೆ ಹೊಲೆಯುಂಟಾಯಿತೇ? ಕೂಡಿರುವ ಪಂಚೇಂದ್ರಿಯಗಳಲ್ಲಿ ನಾಲ್ಕು ಅಧಮವೂ ಒಂದು ಅಧಿಕವೇ?" ಎಂದು ಕೊನೆಯ ಪ್ರಶ್ನೆ ಎತ್ತಿದರು.

ಅಸ್ಪೃಶ್ಯತೆಯ ಸಮಸ್ಯೆಯಲ್ಲಿ ಈ ಪ್ರಶ್ನವು ಕೊನೆಯದೇ. ಹರಿಶ್ಚಂದ್ರ ರಾಯನು ಈ ಪ್ರಶ್ನೆಗೆ ಸರಿಯಾದ ಉತ್ತರ ಕೊಡಲಾರದಾದನು. ಬಾಯಿ ಸವರಿದನು. ಪ್ರಶ್ನೋತ್ತರ ಬೆಳೆಯುವಂತೆ ತೋರಿದ್ದರಿಂದ "ಕೋಪಾ ಟೋಪದಿಂದ ಹಲ್ಲ ಕಳೆ, ಬಾಯಿ ಹರಿಯ ಹೊಯ್; ಹೊಡೆಹೊಡೆ ಯೆನ್ನುತ್ತ" ಭೂನಾಥನು ಉರವಣಿಸಿದನು. ಇಂತಿದು ಪ್ರಶ್ನೆಯು ಪ್ರಶ್ನೆ ಯಾಗಿಯೇ ಉಳಿಯಿತು. ಜನಪತಿಗೆ ಅಸಾಧ್ಯವಾದ ಪ್ರಶ್ನೆಯನ್ನು ಜನಾಂಗವಾದರೂ ಇಂದು ಬಿಡಿಸಲೇಬೇಕಷ್ಟೇ? ಅಸ್ಪೃಶ್ಯತೆಯನ್ನು

ಸಾಧಿಸುವುದಕ್ಕೆ ಹರನೇ ಸತ್ಯವೆಂಬ ಬಿರುದು ತೊಟ್ಟ ಸತ್ಯಪ್ರತಿನಿಧಿಯೆನಿಸುವ ಹರಿಶ್ಚಂದ್ರನಿಗೂ ಆಗಲಿಲ್ಲವೆಂದರೆ ಅದರ ಅರ್ಥವೇನು? ಅದಕ್ಕೆ ಅರ್ಥ ಹೇಳಿ ಅದನ್ನು ಕಾರ್ಯರೂಪದಲ್ಲಿ ತರುವುದು ಕನ್ನಡಿಗರಿಗೆ ಅಸಾಧ್ಯವೇನೂ ಅಲ್ಲವೆಂಬುದಕ್ಕೆ ಅವರ ಇತಿಹಾಸವೇ ಸಾಕ್ಷಿಯಾಗಿದೆ.

ಸಾಮಾಜಿಕ ಸಮಸ್ಯೆಗಳಲ್ಲಿ ಸುಧಾರಕ ಪಂಥಕ್ಕೆ ಸೇರಿದವನೆನಿಸುವ ನಾನು ಸಾರಸ್ವತ ಪ್ರಪಂಚದಲ್ಲಿಯೂ ಸುಧಾರಕನು; ಅಲ್ಲ ನಿರ್ಮಾಣಕನು. ಷಟ್ಪದಿ ನಿರ್ಮಾಪಕನೆಂದು ಹೇಳಲಾಗದಿದ್ದರೂ ಷಟ್ಪದಿ ಸಂಪ್ರದಾಯ ಸ್ಥಾಪಕನೆನ್ನುವ ಮಟ್ಟಿಗಾದರೂ ಕನ್ನಡ ಪಂಡಿತರು ಧೈರ್ಯಗೊಂಡಿದ್ದು ಒಳ್ಳೆಯ ಲಕ್ಷಣವೇ ಸೈ. ವೀರವೀರೇಶ್ವರನಾದ ವೀರಭದ್ರದೇವರ ಚರಿತೆಯನ್ನು ಸಾರುವ 'ವೀರೇಶ ಚರಿತೆ'ಗೆ ಬಳಸಿಕೊಂಡ ಷಟ್ಪದಿಯು ಕನ್ನಡದಲ್ಲಿ ಏಳನೆಯ ಷಟ್ಪದಿಯೆಂದು ಒಪ್ಪಿಕೊಳ್ಳುವಿರಾ? ವೀರಭದ್ರನಿಗೆ ಅನುಗುಣ ಶೈಲಿಯಾದ "ಮೊಸಲು ಕವಿತೆ"ಯೆನಿಸುವ ಆ ಕಾವ್ಯಕ್ಕೆ ಉದ್ದಂಡ ಷಟ್ಪದಿಯೊಂದು ವೈತಾಳುವುದು ಅವಶ್ಯಕವಾಗಿರಲಿಲ್ಲವೇ? "ಕವಿಮುಖಕವಾಟ ಶಾಸ್ತ್ರ"ದಂತಿದ್ದ ಆ 'ವೀರೇಶ ಚರಿತೆ'ಗೆ ಗಂಡುಗೆಚ್ಚಿನ ಛಂದಸ್ಸು ನಿರ್ಮಾಣವಾಗುವುದು ಅನಿವಾರ್ಯವೇ ಅಲ್ಲವೇ? ವೀರಭದ್ರದೇವರ ಚರಿತೆಯೇ ಕವಿಗೊಂದು ನಿರ್ಮಾಣಕಶಕ್ತಿ ಕೊಡುವುದೆಂದು ಅನುಭವದಿಂದ ಸಾರಿ ಹೇಳಬಲ್ಲೆನು. ತೀರ ಇತ್ತೀಚಿನ ಲಾವಣಿಕಾರನಾದ ದಿ. ಖಾಜಾಭಾಯಿ ಕವಿಯು "ವೀರಭದ್ರದೇವರ ಘನ್ನ"ವನ್ನು ನೀವು ಓದಿಸಿ ಕೇಳಿದರೆ ಆ ಮಾತು ಮನವರಿಕೆಯಾಗುತ್ತದೆ.

ಕನ್ನಡ ಕವಿಗಳೆಲ್ಲ ಸಂಸ್ಕೃತ ಕವಿಗಳನ್ನು ಅನುಸರಿಸಿ, ರಾಮನ ಕಥೆ, ಕೌರವ-ಪಾಂಡವರ ಕಥೆ, ಬಹಳವಾದರೆ ಭಾಗವತದೊಳಗಿನ ಭಾಗ ಆರಿಸಿಕೊಂಡು ಕವನ ರಚಿಸಿ ಕೃತಕೃತ್ಯರಾಗುತ್ತಿದ್ದರು. ಆ ಸಂಪ್ರದಾಯವನ್ನು ಅನುಸರಿಸಲಾರದವನು ಸಂಪ್ರದಾಯ ಬಾಹಿರನು. ಕಥಾವಸ್ತುವಿಗಾಗಿ ಸಂಸ್ಕೃತ ಕವಿಗಳನ್ನು ಆಶ್ರಯಿಸಿದರೆ ಛಂದಸ್ಸಿಗಾಗಿ ಸಹ ಸಂಸ್ಕೃತವನ್ನೇ ಆಶ್ರಯಿಸಬೇಕೇ? ಛಂದಸ್ಸು ಸಂಸ್ಕೃತದ್ದಾಗಿದ್ದರೂ ಪದಬಂಧವೂ ಸಂಸ್ಕೃತವೇ ಇರಬೇಕೇ? ಒಟ್ಟಾಗಿ ಸಂಸ್ಕೃತವನ್ನೇ ಬಹಿಷ್ಕರಿಸಬೇಕೆನ್ನುವ

ಪಾಖಂಡಿ ವರ್ಗಕ್ಕೆ ಸೇರಿದವನಾಗಬೇಕೆಂದು ನನ್ನ ಅಭಿಪ್ರಾಯವಲ್ಲ. ಸಂಸ್ಕೃತವನ್ನು ಓದಲಿ, ಅರಗಿಸಿಕೊಳ್ಳಲಿ, ಅನುಕರಿಸಲಿ, ಅನುಸರಿಸಲಿ—ಆದರೆ ಕನ್ನಡದ ಕೆಚ್ಚಿನಿಂದ ಕನ್ನಡದ ಉಸಿರಲ್ಲಿ ಸಾರುವುದನ್ನು ಸಾರಲೆಂದು ನನ್ನ ಮತ. ನನಗೂ ಸಂಸ್ಕೃತ ಭಾಷೆಯ ಪರಿಚಯವೊಂದಿಷ್ಟಿತ್ತು; "ಉಭಯಕವಿ-ಕಮಲರವಿ"ಯೆಂದು ನಾನೂ ಹೇಳಿಕೊಂಡಿರುವೆನು. ಆದರೆ ನನ್ನ ಕಾವ್ಯಗಳಲ್ಲಿ ಬರುವ ಕಾವ್ಯವಸ್ತುವೇ ಬೇರೆ; ಕಥಾನಾಯಕರೇ ಬೇರೆ. ಬಳಕೆಯಿಲ್ಲದೆ ಜನವಾಣಿಯಲ್ಲಿ ಜೀವ ಹಿಡಕೊಂಡು ಬಿದ್ದ ಕನ್ನಡ ಛಂದಸ್ಸುಗಳನ್ನು ಹುಡುಕಿ ತೆಗೆದು ಅವನ್ನೇ ಸುಗಮಗೊಳಿಸಿಕೊಂಡೆನು. ಸಂಸ್ಕೃತದೊಳಗಿನ ಓಜಸ್ಸಿನಿಂದ ತುಂಬಿದ ಶಬ್ದಗಳನ್ನು ಬಿಡದೆ, ಕನ್ನಡದ ಸಾಮತಿ, ಬಳಕೆಮಾತುಗಳನ್ನೂ ಸೊಗಸಾಗಿ ಹೊಂದಿಸಿಕೊಂಡು ಕನ್ನಡ ನುಡಿಗೊಂದು ಮೆರುಗನ್ನು ತರಲು ಪ್ರಯತ್ನಿಸಿದೆನು. ಈ ನನ್ನ ಪ್ರಯತ್ನದ ರೀತಿಯನ್ನು ಇಂಗ್ಲಿಷ ವಿದ್ವಾಂಸರೂ, ಅರಬೀ ಪಾರಸೀ ವಿದ್ವಾಂಸರೂ ಆದ ಕನ್ನಡ ಪಂಡಿತ ಕವಿಗಳು ಅನುಸರಿಸಿದರೆ ಭಾಷೆಗೊಂದು ಅಮೋಘವಾದ ಉಪಕಾರ ಮಾಡಿದಂತಾಗುತ್ತದೆಂದು ನನ್ನ ನಂಬಿಗೆಯಿದೆ

ಲೋಹಿತಾಶ್ವನನ್ನು ಕಳಕೊಂಡ ಚಂದ್ರಮತಿಯ ಶೋಕಪ್ರಸಂಗವನ್ನಾಗಲಿ, ಸಿದ್ಧರಾಮನನ್ನು ಅಗಲಿದ ಸುಗ್ಗಲೆಯ ಭ್ರಾಂತಿಪ್ರಸಂಗವನ್ನಾಗಲಿ ಮನದಂದರೆ—ಆ ಕವನಸಾಲುಗಳು ಇಪ್ಪತ್ತನೆಯ ಶತಮಾನದಲ್ಲಿ ಯಾರೋ ಒಬ್ಬ ಕವಿಯು ಬರೆದಿರಬಹುದೆನ್ನುವಂತಿವೆ. ಆ ಛಂದಸ್ಸು, ಆ ಪದಬಂಧ, ಆ ಭಾಷೆ, ಆ ವಿಚಾರ ಏಳು ನೂರು ವರುಷಗಳ ಹಿಂದಿನವೆಂದು ಯಾರೂ ಅನ್ನಲಾರರು. ಇವಕ್ಕೆ ಅಮರಕವಿತೆಯೆನ್ನದಿದ್ದರೂ ಅಜರಕವಿತೆಯೆಂದಾದರೂ ಅನ್ನುವುದಕ್ಕೆ ಅಡ್ಡಿ ತೋರುವದಿಲ್ಲ ಹರಿಶ್ಚಂದ್ರ ಕಾವ್ಯವನ್ನು ಇಪ್ಪತ್ತನೆಯ ಶತಮಾನದ ಯಾವ ಶಾಲೆ-ಕಾಲೇಜುಗಳಲ್ಲಾದರೂ ವಿದ್ಯಾರ್ಥಿ-ವಿದ್ಯಾರ್ಥಿನಿಯರೆಲ್ಲರಿಗೂ ಒಟ್ಟಾಗಿ ಓದಿ ಹೇಳಿದರೆ, ನಾಚಿ ಮುಖ ಮುಚ್ಚಿಕೊಳ್ಳುವ ಸಂದರ್ಭವು ಯಾರಿಗೂ ಬರಲಾರದೆಂದು ಎದೆತಟ್ಟಿ ಹೇಳುವೆನು ನನ್ನ ಕಾವ್ಯದ ನಿರ್ದುಷ್ಟ-ಉಪಯುಕ್ತತೆಯ ಬಗ್ಗೆ ನಾನು ತಳೆಯುತ್ತಿರುವ ಅಭಿಮಾನವು ಸಟಿಯೋ ದಿಟವೋ — ಅದು ಅನುಕರಣೀಯವೋ ಅಲ್ಲವೋ ನೀವೇ ನಿರ್ಧರಿಸಿರಿ

ನನ್ನ ಕಾವ್ಯದಲ್ಲಿ ಇಪ್ಪತ್ತನೆಯ ಶತಮಾನದ ಜಾತ್ಯತೀತ ರಾಷ್ಟ್ರದ ನಾಗರಿಕರಿಗೆ ಒಪ್ಪಿಗೆಯಾಗಬಹುದಾದ ಅನೇಕಷ್ಟೋ ಸಂಗತಿಗಳನ್ನು ತೋರಿಸಿ ಕೊಡಲಿಕ್ಕೆ ನನಗೆ ಅಭಿಮಾನವೆನಿಸುತ್ತದೆ. ಹರಿಶ್ಚಂದ್ರ ಕಾವ್ಯದ ಆರಂಭ ದಲ್ಲಿ ಬರುವ ಪ್ರಾರ್ಥನಾ ಪದ್ಯವೊಂದು ಉದಾಹರಿಸಿದರೆ ಸಾಕೆಂದೆನಿಸುತ್ತದೆ. "ಶ್ರೀಪತಿಗೆ ಸೊಬಗನ್ನೂ, ಉಡುಪತಿಗೆ ಶಾಂತಿಯನ್ನೂ, ವಾಣೀಪತಿಗೆ ಚಾತುರ್ಯವನ್ನೂ, ದಿವಸ್ಪತಿಗೆ ಪ್ರತಾಪವನ್ನೂ, ಸುರಪತಿಗೆ ಭೋಗ ವನ್ನೂ, ರತಿಪತಿಗೆ ಮೂಲೋಕವಾರಿಸುವ ರೂಪವನ್ನೂ, ಸರಿತ್ಪತಿಗೆ ಗಂಭೀರತೆಯನ್ನೂ, ಸ್ವಾಹಾಪತಿಗೆ ತೇಜವನ್ನೂ ಕೊಟ್ಟ ಗುರುಮೂರ್ತಿ ಯಾದ ಪಂಪಾಪತಿ ವಿರೂಪಾಕ್ಷದೇವನು ನಮಗೆ ಇಷ್ಟಾರ್ಥಸಿದ್ಧಿಯನ್ನು ಕೊಡಮಾಡಲಿ" ಎನ್ನುವ ಪದ್ಯವು ಅಂತರ್ರಾಷ್ಟ್ರೀಯ ಪ್ರಾರ್ಥನಾಪದವಾಗ ಲಾರದೇ? ಕನ್ನಡಿಗರೆಲ್ಲರೂ ಒಕ್ಕೊರಲಿನಿಂದ ಈ ಗೀತವನ್ನು ಪಠಿಸಲು ಯೋಗ್ಯವಾಗಿಲ್ಲವೇ? ಪಂಪಾಪತಿಯ ಪ್ರಾರ್ಥನೆಯಂತೆ ಪಂಪಾಂಬಿಕೆ ಯದೂ ಒಂದು ಪದ್ಯವಿದ್ದುದನ್ನು ನೀವು ಮರೆತಿರಲಿಕ್ಕಿಲ್ಲವಷ್ಟೇ?

ಹರಿಶ್ಚಂದ್ರ ಚಾರಿತ್ರ ಕೃತಿಗೆ ಪಂಪಾ ವಿರೂಪಾಕ್ಷನು ಒಡೆಯನು; ಕೃತಿಯ ಪಾಲಕರು ಲೋಕದ ಭಕ್ತಜನರು; ಕೃತಿಯನ್ನು ಹೇಳಿದವನು ಹಂಪೆಯ ಹರೀಶ್ವರನ ವರಸುತನು.--ಇದೀಗ ಈ ವಿನಯವನ್ನು ನಾನಾಗಿ ಹೇಳಿಕೊಳ್ಳುವುದು ಆಧ್ಯತೆಯೆನಿಸಿದರೂ ಕನ್ನಡದ ಶರಣರ ನಾಡಿನ ನೀರು ಕುಡಿದು ಬೆಳೆದು ಬಂದ ಬೆಳಸವಿದು. ಇದನ್ನು ಕಳಕೊಳ್ಳುವುದೆಂದರೆ ಕನ್ನಡತನ ಕಳಕೊಂಡಂತೆಯೇ ಸರಿಯೆಂದು ನನ್ನೆಣಿಕೆ.

ನನ್ನ ಕಾವ್ಯಗಳನ್ನು ಕೇಳಿ, ಓದಿ ರಾಜಾಸ್ಥಾನಗಳೂ ಮೆಚ್ಚಿಕೊಳ್ಳಲಿ; ಅವಷ್ಟೇ ಮೆಚ್ಚಿಕೊಂಡರೆ ಸಾಕಾಗದು; ಜನಸಾಮಾನ್ಯವೂ ಮೆಚ್ಚಿಕೊಳ್ಳ ಬೇಕೆಂದು ನನ್ನ ಉದ್ದೇಶವಿತ್ತು. ಈ ಉದ್ದೇಶದ ಮಹತ್ವವನ್ನು ಅರಿತರೆ ಕಥಾವಸ್ತು, ಭಾಷೆ, ಬಿಗಿ, ಬಂಧ ಇವೆಲ್ಲವುಗಳಲ್ಲಿ ಮಾರ್ಪಾಡು ಅವಶ್ಯಕ ವೆಂಬುದು ಮನವರಿಕೆಯಾಗುತ್ತದೆ. ಕಾವ್ಯಲೇಖಕನಾಗುವ ಧ್ಯೇಯಕ್ಕಿಂತ ಕಾವ್ಯನಾಯಕನಾಗಬೇಕೆನ್ನುವ ಧ್ಯೇಯವು ದೊಡ್ಡದು. ಅಂಥ ದೊಡ್ಡ ಉದ್ದೇಶವು ನನಗೂ ಇತ್ತು. ಆದರೆ ಅದು ಸಣ್ಣ ಬಾಯಿಗೆ ಹಿಡಿದ ದೊಡ್ಡ

ತುತ್ತಿನಂತಾಯಿತು. ಆದರಿಂದ ನನ್ನ ಉದ್ದೇಶವು ತುಸುವಟ್ಟಿಗಾದರೂ ಪ್ರಾಪ್ತಿಸಿತೆಂದು ನಾನು ತೃಪ್ತಿಪಟ್ಟುಕೊಂಡಿಲ್ಲ. ಹೆಮ್ಮೆಯಿಂದ ಬೀಗಿ ಹೋಗಿಲ್ಲ. ಯಾವ ಹರಿಹರ ಮಹಾಕವಿಯ ಶಿಷ್ಯತ್ವವಾಗಲಿ, ಹಂಪೆಯ ವಿರೂಪಾಕ್ಷನ ಸಾನ್ನಿಧ್ಯವಾಗಲಿ, ಗುರು ಪದ್ಮರಸನ ಅನುಗ್ರಹಪಾತ್ರತೆಯಾಗಲಿ, ರಾಜಾಸ್ಥಾನಗಳಲ್ಲಿ ದೊರೆತ ಹಲವು ದಿಗ್ವಿಜಯಗಳಾಗಲಿ—ಇವೆಲ್ಲಕ್ಕೂ ನೆಲೆಯಾದ ಆಜನ್ಮ ನೈಷ್ಠಿಕ ಬ್ರಹ್ಮಚರ್ಯವನ್ನು ಕೈಕೊಂಡುದಾಗಲಿ, ಸಾಮಾನ್ಯ ಮಾತೆಂದು ಇಂದಿಗೂ ಅನಿಸುವದಿಲ್ಲ. ಇವುಗಳ ಫಲವಾಗಿ ರಾಘವಾಂಕನು "ರಾಘವಾಂಕ ಕಾವ್ಯ"ಕ್ಕೆ ನಾಯಕನಾಗಬೇಕಾಯಿತು! ಉದಯೋನ್ಮುಖ ಕನ್ನಡ ತರುಣರೇ, ಈ ದಾರಿಯಲ್ಲಿ ನೀವು ಇನ್ನಿಷ್ಟು ಆಳವಾದ ಕೃಷಿಯನ್ನು ಕೈಕೊಳ್ಳುವಿರೆಂದು ನಂಬಿರುವೆನು. ಈ ವಿಷಯವನ್ನು ಹೇಳಿಕೊಳ್ಳುವುದರಲ್ಲಿ ಒಂದಿಷ್ಟು ಜಂಭ ತೋರಿಬಂದರೆ ಮನ್ನಿಸಿರಿ, ನಡೆಯುವವರು ಎಡಹದೆ ಕುಳಿತವರೆಡಹುವರೇ?

ಕನ್ನಡ ತರುಣರೇ, ನನ್ನನ್ನು ನೀವು ಮರೆಯಬಹುದು. ಆದರೆ ನನ್ನ ಕಾವ್ಯಸೃಷ್ಟಿಯಲ್ಲಿ ಬರುವ ಪಾತ್ರವರ್ಗವನ್ನು ಮರೆಯಲಾರಿರಿ "ಅಪರಾಧ ಮಾಡಿ ತಪ್ಪಿಸಿಕೊಂಡವರುಂಟು; ಅಪರಾಧಕ್ಕೆ ಶಿಕ್ಷೆಯುಂಡವರುಂಟು. ಆದರೆ ಯಾವ ಅಪರಾಧವೂ ಇಲ್ಲದೆ ಧರ್ಮಮೂರ್ತಿಗಳಾಗಿದ್ದ ಇಂಥ ಗಂಡಹೆಂಡರಿಗೆ ಹೀಗೆ ಕಷ್ಟಪರಂಪರೆಗಳು ಬಂದ., ಅವು ಇಷ್ಟು ಘೋರ ರೂಪಿನಲ್ಲಿ ಪರಿಣಾಮಗೊಳ್ಳುವ ಕಥೆಯು ಪ್ರಪಂಚದ ಮತ್ತಾವ ಸಾಹಿತ್ಯದಲ್ಲಿಯೂ ಇರಲಾರದು" ಎಂದು ಪಂಡಿತ ವರ್ಗದ ನಿರ್ಣಯವು ತುಂಬ ದಿಟವಾದುದಾಗಿದೆ. "ಮಂತ್ರಿಗೆ, ಮಗಂಗೆ, ಎನಗೆ, ರಾಜ್ಯಕ್ಕೆ, ಚತುರಂಗ ಸೇನೆಗೆ, ಸಕಲ ಭಂಡಾರಕ್ಕೆ, ನಗರಕ್ಕೆ, ಸರ್ವ ಪರಿವಾರಕ್ಕೆ, ತೇಜದೇಳ್ಗೆಗೆ, ನಿನ್ನ ಹರಣಕ್ಕೆ ಕೇಡು ಬಂದಡೆ ಬರಲಿ; ಮಿಗೆ ಸತ್ಯವಂ ಬಿಟ್ಟು ಕೆಡದಿರು ಅವನೀಶ, ಕೈಮುಗಿದು ಬೇಡಿದೆ"ನೆನ್ನುವ ಸತಿ ಚಂದ್ರಮತಿ! "ತೊಡರ್ವ ರಾಯರನು ಒರೆಸಿಹಾಕುವೆನೆಂದ ನುಡಿನುಡಿದು ನುಡಿಗಲಿತು, ರಣದೊಳಾಂತವರ ಸರ್ವಸ್ವಮಂ ಪಿಡಿಪಿಡಿದು ನಿಂದಿರಗಲಿತು, ಹಗೆಯ ಬಯ್ತಲೆಯ ಬಟ್ಟೆಯೊಳೊಮ್ಮೆಯುಂ ನಡೆನಡೆದು ನಡೆಗಲಿತು, ರಿಪುಗಳಲಿ ಕಪ್ಪವಂ

ಬಿಡಬಿಡದೆ ಕೊಂಡುಕೊಂಡುಣಕಲಿತು, ಕೀರ್ತಿಯೊಡನೆ ಪರಿಪರಿದು ಪರಿದಾಡಕಲಿತ, ಲೋಹಿತಾಶ್ವನೆಂಬ ಕುಮಾರನು! ಸಮತಾ ಶಿವಯೋಗಿಯಾದ ಸಿದ್ಧರಾಮ!'' ಮೊದಲಾದ ಪಾತ್ರಗಳ ಉದಾರತೆಯನ್ನು ನೆನೆದು ನಾನು ಈಗಲೂ ಹೆಮ್ಮೆಪಟ್ಟುಕೊಳ್ಳುತ್ತೇನೆ ಆ ಪಾತ್ರಗಳ ಪರಿಚಯದಿಂದ ಕನ್ನಡ ತರುಣರ.ಅಂತರಾಳವು ಪ್ರಫುಲ್ಲವಾದರೆ ನಾನು ಧನ್ಯನು.

ಇಂತು—ಕನ್ನಡಿಗರ,

**ರಾಘವಾಂಕ**

---

## ೪

# ಚಿಕದೇವರಾಜ ಬಿನ್ನಪ

ಶ್ರೀಯದುಶ್ಶೈಲದೊಡೆಯನ ಒಡವೆಯೆನಿಸುವ ಕನ್ನಡಿಗರೇ,

ಅನಾದಿ ಸಿದ್ಧನಾರಾಯಣನ ಅಡಿಗಳಲ್ಲಿ ಬಿನ್ನಯಿಸಿಕೊಂಡ ಚಿಕದೇವ ರಾಜನು ಅನನ್ಯಜನಸುಲಭನಾದ ಪ್ರಜಾಪರಮೇಶ್ವರನಲ್ಲಿ ಇಂದಿನ ಪರಿ ಯಂತೆ ನನ್ನ ಬಿನ್ನಪವನ್ನು ಸಲ್ಲಿಸಬೇಕೆಂದು ಈ ಓಲೆ ಬರೆಯುತ್ತಿದ್ದೇನೆ. " ಪಿಂತಣ್ಗೆನಿತಾನುಂ ಪಾಪಿಗಳಾದೊಡಂ, ಆವ ಜಾತಿಯೊಳ್ಪುಟ್ಟಿರ್ದೊಡಂ, ಈಗಳುಂ ತತ್ವಜ್ಞಾನದಿಂ ತನ್ನೊಳ್ ಭಕ್ತಿಗೆಯ್ದು ನಂಬಿದವರ್ಗೆ ಮುಕ್ತಿ ತಪ್ಪದೆಂದೆಣಿಸಿ, ಅಕ್ಕರಮನರಿಯದ ಒಕ್ಕಲಿಗರ್ಗಂ, ಪೆಣ್ಗಳ್ಗಂ ಸಕ್ಕದದಿಂ ತತ್ವಜ್ಞಾನಮುಪ್ಪುದರಿದು ಎಂದು ಎಲ್ಲರುಂ ಅರಿವಂತೆ ಕನ್ನಡವಾತಿನೊಳಂ ಮೆಲ್ನುಡಿಗಳಿಂದೆ.... ಬಿನ್ನಪಂ "ಗೆಯ್ದಿರುವೆನು. ಆದಿನಾರಾಯಣನೆಂದರೂ ಪರಶಿವನೆಂದರೂ ಅಷ್ಟೇ. ಅವನು ಮೊದಲು ಪಂಚಮಹಾಭೂತಗಳನ್ನೂ, ಅವುಗಳಿಂದ ಬ್ರಹ್ಮಾಂಡವನ್ನೂ ಸಮೆದನೆಂದೂ, ಅದರಲ್ಲಿ ಬ್ರಹ್ಮಾದಿ ದೇವತೆ ಗಳನ್ನು ಸೃಜಿಸಿ ಅವರವರಿಗೊಂದೊಂದಧಿಕಾರಮುಂ ಮಿತಿಮಾಡಿದನೆಂದೂ ಹೇಳಿಬಿಟ್ಟಿದ್ದೇನೆ ಆ ಅಧಿಕಾರ ಪಡೆದವನೊಬ್ಬನು ಜಗತ್ಸೃಷ್ಟಿಕಾರ್ಯ ವನ್ನು ಕೈಕೊಂಡು ಬ್ರಹ್ಮನೆನಿಸಿದನು; ಇನ್ನೊಬ್ಬನು ಸಂರಕ್ಷಣೆಯ ಹೊಣೆ ಹೊತ್ತು ವಿಷ್ಣುವೆನಿಸಿದನು; ಬೇರೊಬ್ಬನು ಸಂಹಾರಕಾರ್ಯಕ್ಕೆ ತೊಡಗಿ ರುದ್ರನೆನಿಸಿದನು. ಯಾವುದೊಂದು ಕಾರ್ಯಫಲಕ್ಕೆ ಆದಿ-ಮಧ್ಯ-ಅಂತ್ಯ ಗಳಿರಲೇಬೇಕಷ್ಟೇ? ಆ ಮೂರೂ ಕಾರ್ಯಗಳನ್ನು ಒಬ್ಬನೇ ಮಾಡುತ್ತಿ ದ್ದರೂ ಬೇರೆ ಬೇರೆ ಮೂರು ರೂಪುಗಳಲ್ಲಿ ಮೂರು ಬಗೆಯ ಕ್ರಿಯೆಗಳಿಂದ ಮುಗಿಸುತ್ತಾನೆ. ನಿರ್ಮಾಣಕಾರ್ಯಕ್ಕೆ ಒಬ್ಬ ಅಧಿಕಾರಿ, ಅವನ ಕಾರ್ಯಾಂಗ ಗಳಿಗೆ ಅನೇಕ ಸಹಕಾರಿಗಳು ಬೇಕಾಗುವಂತೆ, ಸಂರಕ್ಷಣಾಕಾರ್ಯಕ್ಕೆ ಒಬ್ಬ ಅಧಿಕಾರಿ, ಹಾಗೂ ಅವನ ಕಾರ್ಯವಿಭಾಗಕ್ಕೆ ಅನೇಕ ಸಹಾಯಕಾರಿಗಳು ಬೇಕಷ್ಟೇ? ಅದರಂತೆ ಸಂಹಾರಕಾರ್ಯವೂ ಒಬ್ಬನಿಂದ ಪೂರಯಿಸದಷ್ಟೇ—

ಅವನಿಗೂ ಸಹಾಯಕರು ಬೇಕು. ಈ ಮೂರು ತೆರದ ಸಹಾಯಕರೆಲ್ಲ ದೇವತೆಗಳೆನಿಸಿದರು. ಬ್ರಹ್ಮನೆಂಬವನು ಸೃಷ್ಟಿಯನ್ನು ಹುಟ್ಟಿಸುವ ಕರ್ತವ್ಯ ಮಾಡುವಾಗ ಮನುಷ್ಯನೆಂಬವನು ಯಾವ ಅಸುಖ-ಅಸಮಾಧಾನಗಳಿಗೂ ಈಡಾಗುವದಿಲ್ಲ. ಆದರೆ ನಿರ್ಮಿತವಾದ ಸೃಷ್ಟಿಯು ಸುಂದರವಾಗಿಯೂ ಸಮೃದ್ಧವಾಗಿಯೂ ಉಳಿಯಗೊಡಿಸೆಂದು ಬಿನ್ನಯಿಸುವುದು ಅದರೊಡೆಯನಾದ ಶ್ರೀಪತಿ ವಿಷ್ಣುವನ್ನು ಉಪಾಸಿಸುವರು; ಹಾಗೆ ಮಾಡದಿದ್ದರೆ ದೊರಕೊಂಡ ಸುಖಸಮೃದ್ಧಿಗಳು ಎಲ್ಲಿ ಮಾಣುವವೋ ಎಂದು ಭಕ್ತಿಭರಿತರಾಗುವರು. ಇದು ಮನುಷ್ಯನ ಸಹಜಪ್ರವೃತ್ತಿ. ಇವರೇ ವೈಷ್ಣವರೆನಿಸುವರು; ಇನ್ನು ಕೆಲವರು, ನಿರಾತಂಕವಾಗಿ ನೆಲೆಗೊಂಡ ಸುಖಸಮೃದ್ಧಿಗಳಿಗೆ ಸಂಹಾರಕರ್ತನ ಏಟು ಬೀಳಬಾರದೆಂದು, ರುದ್ರನಿಗೆ ಭಯಪಟ್ಟು ಪೊಡಮಡುವರು; ಉಪಾಸಿಸುವರು. ಇವರೇ ಶೈವರು. ಸ್ಥಿತಿಸಂಹಾರಗಳನ್ನು ವಹಿಸಿಕೊಂಡ ಅಧಿಕಾರಿ ದೈವತರು ಯಾರೇ ಇರಲಿ, ಅವರ ಶಕ್ತಿಯೇ ಪ್ರಾಮುಖ್ಯವಾಗಿ ಕಾರ್ಯಕಾರಿಯಾಗುವದರಿಂದ ಆ ಶಕ್ತಿಯೇ ಪೂಜ್ಯಳೆಂದೂ ಉಪಾಸ್ಯಳೆಂದೂ ಆರಾಧಿಸುವ ಜನವರ್ಗದವರು ತಾಂತ್ರಿಕರೆನಿಸುವರು. ಒಟ್ಟಾರೆ ಭಗವಂತ-ಭಕ್ತ ಎಂದು ಎರಡರಲ್ಲಿಯೇ ಎಲ್ಲ ದೇವ-ಮನುಷ್ಯರನ್ನು ಇಬ್ಭಾಗಿಸಬಹುದಾಗಿದೆ.

"ಲೋಕದೊಳ್ ಕೈವಾರಿಗಳರಸನಂ ಪೊಗಳ್ವೆಡೆಯೊಳ್ ನಾಡುಬೀಡುಗರ್ ಅರಸನಾಣತಿವಿಡಿದು ನಡೆವ ಬಗೆಯಂ, ಅದಕ್ಕೊಲ್ದು ಅರಸನ ವರ್ಗ ತಕ್ಕುದನೀವ ಬಗೆಯಂ, ಆಳ್ಗಳ ನೆಲೆಯಂ, ಅರಸನ ನೆಲೆಯಂ, ಅರಸನ ಸಮ್ಮುಖಮಂ ಪಡೆವ ತೆರನಂ, ಸಮ್ಮುಖದೊಳ್ ಇರ್ಪರ ಸುಖಮಂ ಬಣ್ಣಿಸಿದೊಡಂ ಅರಸನನೇ ಪೊಗಳ್ವರೆಂಬರ್." ಈ ಬಗೆಯಾಗಿ ಜಗತ್ಕರ್ತನನ್ನು ಎಲ್ಲ ವರ್ಣಾಶ್ರಮದವರು ಯಜ್ಞಾದಿ ಕರ್ಮಗಳಿಂದ ಸೇವಿಸುತ್ತಲೂ, ಅವನಿಂದ ಅದಕ್ಕೆ ಪ್ರತಿಫಲ ಪಡೆಯುತ್ತಲೂ ಇದ್ದಾರೆ. ಯಜ್ಞ-ಯಾಗಗಳಿಂದ ದೇವತೆಗಳನ್ನು ಸಂತೋಷಗೊಳಿಸುವ ಮನುಷ್ಯರು ದೇವತೆಗಳಿಂದ ಮಳೆ-ಬೆಳೆ, ಸುಖ-ಸಮೃದ್ಧಿಗಳನ್ನು ಪಡೆಯುತ್ತಾರೆ. ಯಾವ ದೇವತೆಯನ್ನು ಪೂಜಿಸಿದರೂ ಆ ದೇವತೆಯ ಹಿಂದೆ ದೇವದೇವನು ನೆಲೆನಿಂತು ಆ ಪೂಜೆಗೆ ಕೈಚಾಚುತ್ತಾನೆ. ಪೂಜೆಗೊಳ್ಳುವ ಕೈಯೇ ವರ ಕೊಡುವದಕ್ಕೆ ಮುಂಬರು

ತ್ತದೆ. ಇದನ್ನರಿತು ಜೀವಿತವಾಗಲಿ, ಕರ್ಮಜೀವನವಾಗಲಿ ಸಾಗುತ್ತಿರ ಬೇಕು, ಹಾಲಿನ ಹಂಬಲವು ಕರುವಿಗಾದ ಮಾತ್ರಕ್ಕೆ ಕೆಲಸ ಕೈಗೂಡುವ ದೆಂತಲ್ಲ; ಆವು ತೊರೆವು ಬಿಡಬೇಕಲ್ಲವೇ? "ಮಾನಿಸರ್ ಸ್ವಯತ್ನದಿಂ ನಿನ್ನ ನೆಲೆಯಂ ತಿಳಿದು ಭಜಿಸಿ ಕಡೆಗಾಣ್ಬರೆಂಬುದು ಮನೋರಥ ಮಾತ್ರಮೇ. ಅದರಿಂ ನೀನೇ ದಯೆಗೆಯ್ದು ನಿನ್ನ ಸ್ವರೂಪಮಂ ತಿಳಿಪಿ ಎನ್ನಂ ನಿನ್ನೂಳಿಗದವನೆನಿಪುದೆನಿಪುದು."

ನಾನು ಆ ದಯಾನಿಧಿಯ ಊಳಿಗದವನು ಹೇಗಾದೆ? ಆ ಒಡೆಯನ ಒಡವೆಯೆಂತೆನಿಸಿದೆಸು? ತಿಳಿದಿರುವಿರಾ?–"ಪರೋಕ್ಷವಮಲ್ಲದೆ ಸಾಕ್ಷಾತ್ಕಾರ ಮಾಗಿಯೆನಗೆ ಕನಸಿನೊಳ್ ನೀಂ ಕರುಣಿಸಿದ ನಂದಕಮೆಂಬ ಪೆಸರ್ವಡೆದ ಅತ್ಯುತ್ತಮಮಪ್ಪುದೊಂದು ಕತ್ತಿಯುಂ ಸ್ವಾಪ್ನಪದಾರ್ಥದಂತೆ ತತ್ಕಾಲ ಮಾತ್ರಾನುಭಾವ್ಯಮಲ್ಲದೆ, ನಿತ್ಯಮೆನಿಸಿ ಎಳ್ಚರೊಳಂ ಎಲ್ಲರ್ಗೆ ಕಾಣಿಸುತ್ತೆ, ನೀನಿತ್ತ ಮೈಮೆಯಿಂದೊಂದೇ ಸೂಡಿಯೊಳ್ಕವಿದು, ಮುತ್ತಿದ ಸಾಲ್ದೆಸೆಯ ಪಗೆವರ ಮೊತ್ತಮಂ ಕತ್ತರಿಸಿ, ಗೆಲ್ಲಮಂ ಕೈಕೊಂಡೆನ್ನಂ ನಿನ್ನೂಳಿಂದ ಕ್ಕೀಡಪ್ಪಂತೆ ನೆಗಳ್ಚಿದೈ."

ಈ ಅಭಯದಾನದ ಬಲದಿಂದಲೇ ನಾನು ಆಹವಮಲ್ಲಾಂಕನಾದೆನು; ಗಂಡರ ಗಂಡನಾದೆನು ದೇವದೇವನಿಗೆ ಸತಿಯಾದವನು, ಮೂರು ಲೋಕಕ್ಕೆ ಗಂಡನೆನಿಸುವನೆಂದೂ, ದೇವದೇವನಿಗೆ ಮಗುವಾದವನು, ಮೂಲೋಕದ ತಂದೆಯೆನಿಸುವನೆಂದೂ ಹೇಳಬೇಕೆ? ವಿಶ್ವಸಾಮ್ರಾಟನು ನನ್ನನ್ನು ಊಳಿಗದಾಳೆಂದು ಸ್ವೀಕರಿಸಿ, ನಂದಕವನ್ನಿತ್ತು ಅರಸೊತ್ತಿಗೆಯ ಊಳಿಗವನೊಪ್ಪಿಸಿದನು ಆ ಸೇವೆಗೆ ಸಲ್ಲುವ ಸಂಬಳವೇನು?–"ಎಂಟು ದೇವತೆಯ ಪಟ್ಟಣಂಗಳಿರ್ಕ್ಕುಂ. ಇವಿನಿತುಂ ಭೋಗಭೂಮಿಗಳೆನಿರ್ಕುಂ. ಇವರೊಳನುಭವಿಸುವ ಭೋಗಮನಿತ್ಯಮಾಡುದರಿಂದೆ ಆನಿವಂ ಬಯಸಿದವ ನಲ್ಲು. ನಿತ್ಯಭೋಗಮೆನಿಪ ನಿನ್ನೂಳಿಗಮನೆ ಬಯಸಿದೆಂ."

ಈಶನೂಳಿಗವನ್ನು ಕೈಕೊಂಡವನು ಯೋಗತ್ರಯಗಳನ್ನು ಕ್ರಮವಾಗಿ ಸಾಧಿಸುತ್ತಾನೆ. ಹೇಗೆಂದರೆ –"ನೀನಿತ್ತ ಸಾಮಗ್ರಿಯಿಂ ನಿನ್ನೂಳಿಗಮಪ್ಪ ನಿತ್ಯಕರ್ಮಗಳನೆಮ್ಮ ಕೈಯೊಳ್ನೀನೆ ಮಾಡಿಸುವುದರಿಂ ವರ್ಣಾಶ್ರಮ

ಧರ್ಮಂಗಳಂ ಆಮೆಸಗುವೆವೆಂಬ ಕಾಮನೆಗಂ ಕಾರಣವಿಲ್ಲೆಂದು ತಿಳಿದು, ಈ ನೆನಪುಗೂಡಿ ವರ್ಣಾಶ್ರಮ ಧರ್ಮಂಗಳನೆಸಗುವ ಜಾಣ್ಮೆಯೇ ಕರ್ಮ-ಯೋಗ. ಈ ಯೋಗದಿಂ ಪಿಂತಣ ಸಕಲ ಪಾಪಂಗಳೆಂಬ ಕಲ್ಮಷಮಂ ಕಳೆದು, ನಿರ್ಮಲಮೆನಿಪಂತಃಕರಣದೊಳ್ ಶಾಸ್ತ್ರೋಕ್ತ ಕ್ರಮದಿಂದ ಇರ್ಪತ್ತುನಾಲ್ಕು ತತ್ವಂಗಳ ನೆಲೆಯುಂ ತಿಳಿದು, ಇವೆಲ್ಲಕ್ಕಂ ಅಧಿಕಮೆನಿಪ ಜೀವಾತ್ಮ-ಪರಮಾತ್ಮ ಸ್ವರೂಪಮಂ ಸಾಕ್ಷಾತ್ಕರಿಸಿದಂತೆ ಅರಿವ ತಿಳಿವೇ ಜ್ಞಾನಯೋಗ. ಜೀವ-ಪರಮರ ನೆಲೆಯುಂ ತಿಳಿದು, ನಿತ್ಯಮೆನಿಪ ವರ್ಣಾಶ್ರಮ ಧರ್ಮಂಗಳನಾಚರಿಸುತ್ತ ವೇದಾಂತ ವಿಹಿತ ಕ್ರಮದೊಳ್ ಪ್ರೀತಿರೂಪವಾಗಿ ನಿನ್ನಡಿಗಳನೆಡೆವಿಡದೆ ನೆನೆವ ನಿಧಿಧ್ಯಾಸವೇ ಭಕ್ತಿಯೋಗ. ಕರ್ಮಯೋಗವು ಮನಸ್ಸಿಗೆ ಪರಿಶುದ್ಧಿಯನೆಸಗುತ್ತ ಜ್ಞಾನಯೋಗವನ್ನುಂಟುಮಾಡಿ, ಭಕ್ತಿಯೋಗಕ್ಕೆ ಅಂಗಮಾಗಿರ್ಪುದಲ್ಲದೆ ಅದು ಸ್ವತಂತ್ರವಾಗಿ ಮೋಕ್ಷಸಾಧನವಲ್ಲ. ಅದರಂತೆ ಜ್ಞಾನಯೋಗವು ಭಕ್ತಿಯೋಗವನ್ನು ಬಳೆಯಿಸುವುದಲ್ಲದೆ ಸ್ವಾತಂತ್ರ್ಯದಿಂ ಮೋಕ್ಷಸಾಧನಮಲ್ತು. ಅದೇ ಪ್ರಕಾರ ಭಕ್ತಿಯುಂ ಸಾಕ್ಷಾನ್ಮೋಕ್ಷಸಾಧನಮಲ್ತು. ನಿನ್ನ ಪ್ರೀತಿಯೊಂದೇ ಮೋಕ್ಷಸಾಧನಂ."

ಯೋಗತ್ರಯಕ್ಕಿಂತ ಪರಮಾತ್ಮನ ಒಲುಮೆಯನ್ನು ಸಂಪಾದಿಸುವುದು ಹೆಚ್ಚು ಶ್ರೇಯಸ್ಕರವಾದಂತಾಯ್ತು. ನಾವು ಜೀವನದಲ್ಲಿ – ಸಂಸಾರದಲ್ಲಿ ಪ್ರೀತಿಸುವ ಎಲ್ಲ ವಸ್ತುಗಳ ಮೇಲಿನ ಪ್ರೀತಿಯನ್ನು ಎಳೆದುಕೊಂಡು ಅದನ್ನು ಪರಮಾತ್ಮನ ಅಡಿಗಳಿಗೆ ತೊಡಗಿಸಿದರೆ, ಪರಮಾತ್ಮನೊಲುಮೆ ಉಂಟಾಗಬಹುದಲ್ಲವೇ? ಸಾಂಸಾರಿಕ ವಸ್ತುಗಳ ಪ್ರೀತಿಯನ್ನು ಹಿಂದೆಳೆದುಕೊಳ್ಳುವುದೆಂದರೆ ವಿಷಯಗಳ ಪರಿತ್ಯಾಗ. ಅದರಲ್ಲಿ ಎರಡು ತೆರ "ವಿಷಯಂಗಳನಿತುಮಂ ನಾಶಗೆಯ್ವುದೊಂದು, ಅಲ್ಲದೊಡೆ ವಿಷಯಂ-ಗಳಿರ್ದೊಡಂ ಅವಂ ಸೋಂಕದಿರ್ಪುದೊಂದು." ಆದರೆ ಇವುಗಳಲ್ಲಿ ಯಾವುದನ್ನು ಆರಿಸಿಕೊಳ್ಳುವುದು? "ಇದರೊಳ್ನೀನುಂಟುಮಾಡಿದ ವಿಷಯಂಗಳನಿತುಮಂ ನಾಶಗೆಯ್ದೊಡೆ, ನಿನ್ನೊಡಮೆಗಳಂ ಕೆಡಿಸಿದ ಸ್ವಾಮಿದ್ರೋಹಂ ಬರ್ಪುದು; ವಿಷಯಂಗಳ ಸೋಂಕಿಲ್ಲದಿರ್ಪುದೆಂದೊಡೆ ಈ ಪ್ರಕೃತಿಮಂಡಲಮಂ ಬಿಟ್ಟು ಪೋಗದರಿಂದಮಶಕ್ಯಮಲ್ತು. ಊರೊಳಿರ್ಪ

ವನಿತಾದಿ ವಿಷಯನುಂ ಮಾಣ್ದು ಬನದೊಳಿರ್ದೊಡಂ, ನೀರೋಳ್ಮುಳುಂಗಿರ್ದೊಡಂ ಸಂಸಾರಸಂಬಂಧಮನುಂಟು ಮಾಡದೆ ಬಿಡವು." ಹೀಗಿದ್ದರೆ ಮುಂದಿನ ದಾರಿಯೇನು?—"ಆಳೋರ್ವಂ ಅರಸನನೆಣಿಸದೆ ಅವನ ಭಂಡಾರಕ್ಕೆ ಸಲುವ ನಾಡು ಬೀಡುಗಳೊಳಿರ್ಪ ಒಡವೆಗಳಂ ತನಗೆಂದು ಘಳಿಸಿ, ತನ್ನಿಚ್ಛೆ ಬಂದಂತೆ ಬೀಯಂಗೆಯ್ದು ಕಿಡಿಸಿದೊಡೆ ಆಸೆಗನುಂ ಸ್ವಾಮಿದ್ರೋಹಿಯುಂ ಅಕ್ಕುಂ; ಅಂತಲ್ಲದೆ ತಾನಾಳೆಂಬ ನೆನಪುಗೂಡಿ ಅವನ ಸೇವೆಗೆಂದೊಡವೆಗಳಂ ಸಂಪಾದಿಸಿದುದೆಲ್ಲಮಂ ಅಂದಂದಿಗೊಪ್ಪಿಸಿ, ಅವನಾರೋಗಣೆಗೆಯ್ದುಳಿದ ಅಮೃತಾನ್ನವನುಂಡು, ಅವನುಟ್ಟುತೊಟ್ಟು ಕಳೆದಿತ್ತೊಡವೆಯುಡಿಗೆಗಳಂ ಧರಿಸಿ, ಸಿರಿವಡೆದು ಮೆರೆದೊಡಂ ನಿಸ್ಪೃಹನುಂ, ವಿಶ್ವಾಸಿಯುಂ ಎನಿಕ್ಕುಂ." ಈ ಬುದ್ಧಿಯಿಂದ ನಡೆದುಕೊಂಡ ವಶಿಷ್ಠ ವಿಶ್ವಾಮಿತ್ರರು ಗೃಹಸ್ಥಾಶ್ರಮದಲ್ಲಿದ್ದರೂ ನಿತ್ಯ ಬ್ರಹ್ಮಚಾರಿಗಳೆಂದೂ, ನಿತ್ಯ ಉಪವಾಸಿಗಳೆಂದೂ ಎನಿಸಿದರು. ಅದಕ್ಕಂತಲೇ ಅನನ್ಯಜನ ಸುಲಭನಾದ ಶ್ರೀಯದುಶೈಲವಲ್ಲಭನು ಅವರಿಗೆ ಸುಲಭನಾದನು.

ಹುಟ್ಟಿದಂದಿನಿಂದ ಸಾಯುವ ವರೆಗೆ ಮನುಷ್ಯನು ಏನಾದರೂ ಮಾಡಲಿಕ್ಕೆ ಬೇಕಲ್ಲವೇ? ಉಪಜೀವನಕ್ಕಾಗಿ ದುಡಿಯದಿದ್ದರೂ ಉಪಜೀವಿಸುವುದಕ್ಕಾದರೂ ಕೈಕಾಲು ಅಲುಗಾಡಿಸಲೇಬೇಕಲ್ಲವೇ? ಈ ದುಡಿಮೆ ಇಲ್ಲವೆ, ಕೈಕಾಲುಗಳ ಅಲುಗಾಟ ಇವಕ್ಕೇ ಕರ್ಮವೆನ್ನುವುದು. ಅವುಗಳಲ್ಲಿ ಕೆಲವು ಒಳ್ಳೆಯುವಿರಬಹುದು; ಕೆಲವು ಒಳ್ಳೆಯುವಲ್ಲದಿರಬಹುದು ಒಳ್ಳೆಯುವಕ್ಕೆ ಸತ್ಕರ್ಮವೆಂದೂ, ಒಳ್ಳೆಯವಲ್ಲವಕ್ಕೆ ದುಷ್ಕರ್ಮವೆಂದೂ ಹೇಳಬಹುದು. ಸತ್ಕರ್ಮದಿಂದ ಪುಣ್ಯವೆಂದೂ, ದುಷ್ಕರ್ಮದಿಂದ ಪಾಪವೆಂದೂ ಹೇಳುವರು. ಆದರೆ ಪುಣ್ಯದಿಂದೇನಾಗುವುದು, ಪಾಪದಿಂದೇನಾಗುವುದು? ಎಂದು ಪ್ರಶ್ನಿಸಬಹುದು. ಪುಣ್ಯವೆಂಬುದು ಪರಮಾತ್ಮನೊಲುಮೆ; ಪಾಪವೆಂಬುದು ಪರಮಾತ್ಮನ ಮುನಿಸು. ಪರಮಾತ್ಮನು ಒಲಿದರೆ ಸುಖವುಂಟಾಗುವದು; ಪರಮಾತ್ಮನು ಮುನಿದರೆ ದುಃಖವುಂಟಾಗುವದು.

ಕಾರ್ಯಾಕಾರ್ಯಗಳನ್ನು ನಿರ್ಣಯಿಸದೆ ತಮ್ಮಿಚ್ಛೆ ಬಂದಂತೆ ನಡೆದರೆ ಕರ್ಮವೆನಿಸುವದು. ರೂಢಿಯಂತೆ ಮಾಡುತ್ತ ಸಾಗುವ ರೀತಿಯು

ವಾಸನೆಯೆನಿಸುವದು. ಮಾಡುತ್ತ ಬಂದ ಕರ್ಮಗಳ ಬಗ್ಗೆ ನಾನು ಮಾಡು ವವನೆಂದು ಪ್ರೀತಿ ಹುಟ್ಟುವದಕ್ಕೆ ರುಚಿಯೆನ್ನುವರು. ಹೀಗೆ "ರುಚಿಗೂಡಿ ನಡೆದವರ್ ಆ ಕರ್ಮದ ಫಲಮಂ ಭುಜಿಸಲ್ಕೆ ಅನುಗುಣವಾಗಿ ನೀನಿತ್ತ ದೇವಮನುಷ್ಯಾದಿ ಶರೀರದೊಳ್ ಪುಗುವರ್. ಇದು ಪ್ರಕೃತಿಸಂಬಂಧ ಮನೀವುದು" ಈ ಬಗೆಯ ಪ್ರಕೃತಿಸಂಬಂಧವುಂಟಾಗುವುದರಿಂದಲೇ ದೇಹವೇ ನಾನೆಂಬ ಭ್ರಮೆಯುಂಟಾಗುವದು. ಇದರಂಥ ಅಜ್ಞಾನವಾಗಲಿ, ಅವಿದ್ಯೆಯಾಗಲಿ ಇನ್ನೊಂದಿಲ್ಲ ಅಜ್ಞಾನದ ಅಂಧಕಾರದೊಳಗಿಂದಲೇ, ಅವಿದ್ಯೆಯ ಗೂಢಗುಹೆಯೊಳಗಿಂದಲೇ ಕೆಲವರಿಗೆ ವೈರಾಗ್ಯದ ಬೆಳಕು ತೋರಿ ಅವರು ಮುಮುಕ್ಷುಗಳೆನಿಸುವರು "ಅದರಿಂದೆ ಈ ಭ್ರಾಂತಿಗಳ ನುಳಿದು ನಿನ್ನಿಂದಮೆ ಬರ್ದುಂಕುವೆನೆಂದು ನಿನ್ನಂ ನೆರೆನಂಬಿದವರ್ ಎಂತಪ್ಪ ರಾದೊಡಂ ಅವರ ಯೋಗಕ್ಷೇಮಂಗಳಂ ಪೂರ್ತಿಸಗುವೆನೆಂದು ನೀಂ ಮುನ್ನ ಮರ್ಜುನಂಗೆ ಪೇಳ್ದುದಂ ಮರೆಯದೆ ಈಗಳೆನ್ನಂ ಪಾಲಿಪುದು, ಪಾಲಿಪುದು" ಎಂದು ಅನನ್ಯಜನಸುಲಭನಾದ ಶ್ರೀಯದುಶೈಲವಲ್ಲಭನನ್ನು ಮರೆಹೊಗದೆ ಗತ್ಯಂತರವೇ ಇಲ್ಲ.

"ಆಂ ಅಜ್ಞನುಂ ಅಶಕ್ತನುಂ ಆದುದರಿಂ ನಿನ್ನ ಚಿತ್ತಂ ಬರ್ಪಂತೆ ಇನಿಸುಂ ನಡೆಯಲಾರದ ಎನ್ನಂ ನೀನೇತರದಿಂ ಕೈವಿಡಿವೆಯೆಂದೆಣಿಸಿ ಬೆರ್ಚವನಿತರೊಳೆ, ನೀನೊಡೆಯನುಂ ಆಂ ಒಡಮೆಯುಂ ಅಪ್ಪುದರಿಂದ ಒಡೆಯನೊಡಮೆಯಂ ಕಾಪಿಡುವುದರ್ಕೆ ಕೂಲಿಯಿಲ್ಲೆಂಬೀ ಸ್ವ-ಸ್ವಾಮಿ ಸಂಬಂಧ ಜ್ಞಾನಮುಭಯಮನೀವುತ್ತಿದೆ." ಆದುದರಿಂದ ಊಳಿಗಮನೆಸಗು ವುದರಿಂದ "ಪರತೊಂದಾನಂದಮಿಲ್ಲೆ"ಂದು ಇಂದಿನದಿಂದೇ ಹೊಸ ಊಳಿಗ ದವನಾಗಿ "ಎನ್ನನಾಳ್ಗೊಂಬುದು ಆಳ್ಗೊಂಬುದು" ಎಂದು ಬಿನ್ನವಿಸಿ ಸೇರ್ಪಡೆ ಹೊಂದಬೇಕೆಂಬುದೇ ನನ್ನ ಬಿನ್ನಪ.

ಇಂತು—ಯದುಶೈಲವಲ್ಲಭರ ಸಂತಾನರ

**ಚಿಕದೇವರಾಯ**

---

# ಕುಮಾರವ್ಯಾಸನ ಅಜರಕಾವ್ಯ

ಕನ್ನಡದ ಸಿಡಿಲಾಳುಗಳೇ,

"ಮಗು ಮಾನವನ ತಂದೆ" ಎನ್ನುವ ಮಾತು ಆಧುನಿಕ ಸುಶಿಕ್ಷಿತರಿಗೆ ತೀರ ಪರಿಚಯದ್ದಲ್ಲವೇ? ವ್ಯಾಸಮಹರ್ಷಿಗಳಿಗೆ ನಾನು ಕುಮಾರವ್ಯಾಸನಾಗಿ ಕನ್ನಡನಾಡಿನಲ್ಲಿ ಜನ್ಮವೆತ್ತಿದೆನು. ಆ ಮಾತಿಗೆ ಐದು ನೂರು ವರುಷಗಳಾಗಿ ಹೋದವು. ಆದರೂ ನಾನು ಕುಮಾರವ್ಯಾಸನೇ ಸರಿ. ಕವಿಯು ನಿರಂತರ ಕುಮಾರವ್ಯಾಸನಾದ ಬಳಿಕ ಅವನ ಕವಿತೆ ಅಜರಕಾವ್ಯವಾಗಲಾರದೇ? ನಿಜವಾಗಿಯೂ ವೀರನಾರಾಯಣನೇ ಕವಿ; ಲಿಪಿಕಾರ ಕುಮಾರವ್ಯಾಸ! ಕರಣಿಕರ ಮನೆತನದಲ್ಲಿ ಹುಟ್ಟಿಬಂದುದು ಸಾರ್ಥಕವಾಗಬೇಕಾದರೆ ಲಿಪಿಕಾರನಾಗುವುದೇ ವಾಸ್ತವಿಕ. ವೀರನಾರಾಯಣ ಕವಿಯು ತನ್ನ ಕಾವ್ಯವನ್ನು ಕುಮಾರವ್ಯಾಸನಿಂದ ಬರೆಯಿಸಿದನೆಂದು, ಕುಮಾರವ್ಯಾಸನು ಬರೆದುದೆಂದು ಭ್ರಾಂತಿಬಟ್ಟು ಹೇಳುವ ಮಾತಾಗಿದೆ. ಇರಲಿ. ವೀರನಾರಾಯಣನು ಕಾವ್ಯದ ತುಂಬ ತನ್ನ ಮಹಿಮೆಯನ್ನೇ ಬಿತ್ತರಿಸಿದ್ದಾನೆಂದರೆ ತಪ್ಪೇನು? ಅದಕ್ಕೆಂತಲೇ ಆ ಕಾವ್ಯವು ದ್ವಿಜರಿಗೆ ಪರಮವೇದದ ಸಾರವಾಗಿದ್ದರೆ, ಯೋಗೀಶ್ವರರಿಗೆ ತತ್ವವಿಚಾರವಾಗಿದೆ. ಅದು "ಶೂರರ ಸಮ್ಮೇಲನವೂ, ಛಲಕ್ಕೆ ನೆಲಮನೆಯೂ, ಪುರುಷಪ್ರಯತ್ನದ ಪರಾಕಾಷ್ಠೆಯೂ, ಕಾಳಗದ ಸಂಗ್ರಹಶಾಲೆಯೂ, ಘಟನೆಗಳ ಕೋಠಿಯೂ, ಕಣ್ಣೀರಿನ ಕಡಲೂ" ಆಗಿದೆ. ಆ ಕಾವ್ಯದ ಕವಿಯು ವೀರನಾರಾಯಣನಾಗಿರದಿದ್ದರೆ–ಹಲಗೆಬಳಪವ ಪಿಡಿಯದ ಒಂದು ಅಗ್ಗಳಿಕೆಯಾಗಲಿ, ಪದವಿಟ್ಟು ಅಳಿಸದ ಒಂದು ಅಗ್ಗಳಿಕೆಯಾಗಲಿ ಕಡೆ ಪೂರಯಿಸುತ್ತಿದ್ದಿತೇ? ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆಯನ್ನೂ, ಬಳಸಿ ಬರೆಯಲು ಕಂಠಪತ್ರದ ಉಲುಹುಗೆಡದ ಅಗ್ಗಳಿಕೆಯನ್ನೂ ಸಾರ್ಥಕಪಡಿಸಲು ಸಾಧ್ಯವಾಗುತ್ತಿದ್ದಿತೇ? ಕವಿ ವೀರನಾರಾಯಣನಾಗಿದ್ದಂತೆ

ಕಾವ್ಯನಾಯಕನೂ ವೀರನಾರಾಯಣನೇ ಆಗಿದ್ದಾನೆಂಬುದೂ ತಿಳಿಯತಕ್ಕ ಮಾತಾಗಿದೆ. ಅಂತೆಯೇ "ತಿಣಿಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ" ಎಂದು ರಾಮಾಯಣದ ದಾರಿಗೆ ಹೋಗದೆ "ವರ ಮಹಾಭಾರತವಿದೊಂದೇ ದುರಿತದುರ್ಗ ವಿಭೇದಕರವೀರೇಳು ಲೋಕದಲಿ" ಯೆಂದು ವಿಸ್ತಾರವಾದ ವಸ್ತುವನ್ನು ಆರಿಸಿಕೊಂಡೆನು.

ಲಿಪಿಕಾರ ನಾರಣಪ್ಪ; ಕವಿ ವೀರನಾರಾಯಣ; ಕಾವ್ಯನಾಯಕ ತಾನು ನಾರಾಯಣನೆಂದು ಹೇಳಿಕೊಳ್ಳುವ ಕೃಷ್ಣ. ಕೃಷ್ಣನು ತನ್ನ ಜೀವಿತ ಕಾಲದಲ್ಲಿಯೇ ಪರಮಾತ್ಮನೆನಿಸಿಕೊಂಡ ಮಹಾವ್ಯಕ್ತಿ. "ಆದಿಯಲಿ ನಾನು ನಾರಾಯಣ"ನೆಂದು ಹೇಳಿಕೊಳ್ಳುವ ಆತ್ಮವಿಶ್ವಾಸ—ಆತ್ಮವಿಕಾಸಗಳಿಂದ ಶೋಭಿಸುವ ದಿವ್ಯಪುರುಷ. ಅಂಥ ಪುರುಷೋತ್ತಮನನ್ನು ತನ್ನೊಂದಿಗರಾದ ಪಾಂಡವರು ಮನ್ನಿಸುವುದು ಅರಿದಲ್ಲ; "ಎಮಗೆ ಪರಮಸ್ವಾಮಿ, ಎಮ್ಮುತ್ಸವದ ನೆಲೆ, ಎಮ್ಮೈವರಸು ಯಾದವಶಿರೋಮಣಿ ಕೃಷ್ಣನಭಿಮತವೆಮ್ಮ ಮತ"ವೆಂದು ಪಾಂಡವರು ಸಮ್ಮತಿಸುವುದು ಸಹಜವೇ ಆಗಿದೆ. ಆದರೆ ಅನ್ಯರು ಸಹ ಶ್ರೀಕೃಷ್ಣನ ಪರಮೇಶ್ವರತ್ವವನ್ನು ಅರಿತಿದ್ದರಷ್ಟೇ ಅಲ್ಲ; ಅದನ್ನು ಬಾಯಿಬಿಚ್ಚಿ ಧಾರಾಳವಾಗಿ ಒಪ್ಪಿಕೊಳ್ಳುತ್ತಲೂ ಇದ್ದರು. "ನೀವೆ ಬಲ್ಲಿರಿ ದೇವ, ನೀ ಮಾಯಾವಿ; ಮಾಯಾಪಾಶಬದ್ಧರು ನಾವು ಬಲ್ಲೆವೆ ನಿಮ್ಮನು" ಎಂದು ಅರ್ಜುನನಂಥ ಆತ್ಮಮಿತ್ರರು ಚರಣಗಳಲ್ಲಿ ಎರಗುವರೆಂದರೆ ಆಶ್ಚರ್ಯವೇನು? "ದೇವನೆಂದೇ ನೀವು ಬಗೆವಿರಿ ದೇವತನ ನಮ್ಮಲ್ಲಿ ಲವವಿಲ್ಲ"ವೆಂದು ಕೃಷ್ಣನು ನುಡಿದ ಮಾತು ಪರಿಹಾಸವೆಂದು ಬಗೆದ ಅರ್ಜುನನು—"ದೇವಮಾತ್ರವೆ ನೀವು? ದೇವರ ದೇವರೊಡೆಯರು, ಹೊಗಳುವಡೆ ವೇದಾವಳಿಗಳಳವಲ್ಲ"ವೆಂದು ದೇವಮಿತ್ರನ ಬಾಯನ್ನು ತಡೆಯುತ್ತಾನೆ. ದೇವಪುರುಷನೆಂದು ತಿಳಿದವರಿಗೆ ನಾನು ದೇವಪುರುಷನಲ್ಲವೆಂದು ಹಾರಿಸಿಕೊಳ್ಳುವ ಕೃಷ್ಣನು "ಮರುಳು ಕೌರವ ಜನಪ ಕೇಳೈ, ಮತ್ತೆ ನಮ್ಮಯ ಶೀಲ ಬೇರೆ"ಯೆಂದು ಎಚ್ಚರಿಸುವನು ಆಗ ಕೌರವನು— "ಸಂಗಿಯೆನಿಸನು ಜಗವ ಹುಟ್ಟಿಸಿ ನುಂಗಿದೊಡೆ ನಿಷ್ಕರುಣಿಯೆನಿಸನು; ಅಂಗರಕ್ಷೆಯ ಮಾಡಿ ಮೋಹಿತನಲ್ಲ ಮೂಜಗಕೆ" ಎಂದು ಸಮ್ಮತಿಸುವನಷ್ಟೇ ಅಲ್ಲ; "ಎನ್ನ ಹೃದಯದೊಳಿರ್ದು ಮುರಿವನು ಗನ್ನದಲಿ ಸಂಧಿಯನು"

ಎಂದು ದುರ್ಯೋಧನನು ತನ್ನವರಲ್ಲಿ ಒಪ್ಪಿಕೊಳ್ಳುವುದು ದೊಡ್ಡ ಮಾತು. ಇದರಿಂದ ಕೃಷ್ಣನ ಹಿರಿಮೆ ಕಂಡುಬರುವುದಿಷ್ಟೇ ಅಲ್ಲದೆ, ಕೃಷ್ಣನಿರದ ಸ್ಥಾನವೇ ಇಲ್ಲವೆಂದೂ, ಅವನಿರುವೆಡೆಯಲ್ಲಿ ಅವನರಿವು ಮಸಕಾಗಿಯಾದರೂ ಇದ್ದೇ ಇರುವದೆಂದೂ ಸ್ಪಷ್ಟವಾಗುತ್ತದೆ

ದೇವಪುರುಷನನ್ನು ಪ್ರತ್ಯಕ್ಷವಾಗಿ ಗುರುತಿಸಲಾಗದಿದ್ದರೂ ದೈವದ ಒಲುಮೆ, ಮೋಹ ಇವುಗಳನ್ನಾದರೂ ಗುರುತಿಸಬಹುದಲ್ಲವೇ? ಅದನ್ನು ಗುರುತಿಸುವ ಕಣ್ಣು, ಅದನ್ನು ಒಲಿಸಿಕೊಳ್ಳುವ ರೀತಿ ಪಡೆಯದಿದ್ದರೆ — ಮಾಧವ ವಿಮುಖನಾದರೆ ಕೋಟಲೆ ಸಿದ್ಧವೇ; ಕಡೆಗಾಲ ಸನ್ನಿಹಿತನೇ. "ದೈವದ ಮೋಹ ತಪ್ಪಿದ ಬಳಿಕ ಸುಭಟರ ಸಾಹಸಕೆ ಹುರುಳಿಲ್ಲ; ನಂಬದಿರು ನಿಮ್ಮ ಬಲಹುಗಳ ಕೌರವಾ!" ಎಂದು ಭೀಷ್ಮಪಿತಾಮಹನು ಸಲಹೆ ಕೊಡುತ್ತಾನಲ್ಲವೇ? "ಒಲಿದವರನುಜ್ಜೀವಿಸುವ ಬಗೆ ಬಲುಹು ಮುರಮಥನಂಗೆ ಮುನಿದೊಡೆ ತಲೆಯುಬರಹವ ತೊಡೆವನಲ್ಲದೆ ಸೈರಿಸನು" ದೈವಬಲವನ್ನು ಸಂಪಾದಿಸಿ, ಅದರ ನೆರವಿನಿಂದ ಹಣೆಬರಹವನ್ನು ಬದಲಿಸಿ ಯಶಸ್ವಿಯಾಗಬಹುದು; ಅದಿಲ್ಲದಿದ್ದಾಗ ಹಣೆಬರಹವಿದ್ದರೂ ಅಳಿಸಿಬಿಡುವ ಬಲುಹು ಅದಕ್ಕಿದೆ.

ವೀರನಾರಾಯಣನೇ ಕವಿಯೆಂದೂ, ಕವಿಯೆಂದರೆ ಕುಮಾರವ್ಯಾಸ ಎಂದೂ ಹೇಳಿಯೆ ಬಿಟ್ಟಿದ್ದೇನೆ. ಅಂದಮೇಲೆ ಕೋಳಿವಾಡ ಗ್ರಾಮದ ಕರಣಿಕ ವೃತ್ತಿಯವನಾದ ನಾರಣಪ್ಪನು ರಾಜನನ್ನಾಗಲಿ, ಶ್ರೀಮಂತನನ್ನಾಗಲಿ ಆಶ್ರಯಿಸುವ ಕಾರಣವೇನಿದೆ? ಕರಣಿಕ ನಾರಣಪ್ಪನು ಗದುಗಿನ ವೀರನಾರಾಯಣ ಕವಿಯ ಕೈಯಲೇಖನಿಯಾದ್ದರಿಂದ ಅವನನ್ನೇ ಆಶ್ರಯಿಸಿದ್ದನೆಂದು ಹೇಳಬಹುದು. ಸ್ನಾನ ಮಾಡಿ ಮಡಿಯಿಂದ ಬಂದು ದೇವಾಲಯದ ಕಂಬದ ಬಳಿಯಲ್ಲಿ ಕರಣಿಕನು ಕಣ್ಣುಮುಚ್ಚಿ ನಿಂತುಕೊಂಡನೆಂದರೆ ದೇವಕವಿಯು ತನ್ನ ಲೇಖನಿಯನ್ನು ಎತ್ತಿಕೊಂಡು ಕಾವ್ಯವನ್ನು ಬರೆಯಲಿಕ್ಕೆ ಆರಂಭಿಸುವನು. ದೇವಲೇಖನಿಯಾದ ನನ್ನ ಧರ್ಮವನ್ನು ಏನೆಂದು ಹೇಳಲಿ? ಬ್ರಾಹ್ಮಣ ಕವಿಗಳು ಮಾತ್ರ ನನ್ನನ್ನು ಸ್ಮರಿಸಿರುವುದರಿಂದ ಬ್ರಾಹ್ಮಣ ಕವಿಯೆಂದು ನಿರ್ಣಯಿಸುವುದು ಬೇಡ. ಹೇರಳವಾದ ಶಿವಸ್ತುತಿ,

ಕರ್ಮಮಾರ್ಗದ ಉಪೇಕ್ಷೆ, ವಾಯುದೇವರ ಪೂಜೆಯ ಪ್ರಸ್ತಾಪವಿಲ್ಲದಿರುವಿಕೆ, ಇಷ್ಟರಿಂದ ದ್ವೈತವಿರೋಧಿಯೆಂದು ಹೇಳಲಿಕ್ಕೆ ಬಂದರೆ, ನಾನು ಅದ್ವೈತಿಯೆಂದುಕೊಂಡಂತಾಯಿತೇ? ಹಾಗಾದರೆ ಜೀವಬ್ರಹ್ಮೈಕ್ಯದ ಮಾತನ್ನು ಎಲ್ಲಿ ಪ್ರತಿಪಾದಿಸಲಾಗಿದೆ? ಭಕ್ತಿಗೆ ಕೊಟ್ಟ ಅತಿಶಯವಾದ ಪ್ರಧಾನತೆ, ಜೀವದ ಅಸ್ವಾತಂತ್ರ್ಯ ಇವುಗಳನ್ನು ರೇಖಿಸಿದ ಮಾತ್ರಕ್ಕೆ ಕವಿ ಶ್ರೀವೈಷ್ಣವನಾಗಿರಬಹುದೆಂದು ಯೋಚಿಸಬಹುದೇ? ಹೀಗೆಯೇ ಒಂದೊಂದು ಲಕ್ಷಣವನ್ನು ಕಂಡು ತೋರಿಸುತ್ತ ಭಾಗವತನೆಂದೂ, ವೀರಶೈವನೆಂದೂ, ಭಕ್ತಿಪಂಥದ ಸಂತನೆಂದೂ ಪ್ರತಿಪಾದಿಸುವುದಕ್ಕೆ ತೊಡಗಬಹುದು. ಈ ಎಲ್ಲ ತರ್ಕವಿತರ್ಕಗಳು ವಾಚಕರು ಊಹಿಸಿದವುಗಳೇ ಆಗಿವೆ. ನಾನಾಗಿ ಒಪ್ಪಿಕೊಂಡು ಹೇಳಿದವುಗಳಲ್ಲ. ಕವಿಯಲ್ಲಿ ಸಕಲ ಮತಸಹಿಷ್ಣುತೆಯನ್ನು ಕಾಣುವಿರಿ; ಮತಗೋಷ್ಠಿಗಳ ನಿರ್ಬಂಧಕ್ಕೆ ಸಿಕ್ಕದ ವಿಶಾಲ ಹೃದಯವನ್ನು ಕಾಣುವಿರಿ; ಪರಿಪಕ್ವವಾದ ಮನಸ್ಸನ್ನು ಕಾಣುವಿರಿ. ಕರಣಿಕ ನಾರಣಪ್ಪನ ಮತ ಯಾವುದೇ ಇರಲಿ; ಆದರೆ ನಾರಣಪ್ಪನೆಂಬ ದೇವಲೇಖನಿಯ ಮತ ಸರಳವಾದದ್ದು; ಸುಂದರವಾದದ್ದು; ಸತ್ಯವಾದದ್ದು. ಸರಳ-ಸುಂದರ-ಸತ್ಯವಾದ ತತ್ವಕ್ಕೆ ಶಿವವೆಂದರೇನು, ವಿಷ್ಣುವೆಂದರೇನು? ಶಾಶ್ವತವೂ, ಸರ್ವಜ್ಞವೂ, ಸರ್ವವ್ಯಾಪಕವೂ ಆದ ಆ ತತ್ವಕ್ಕೆ ಶರಣಾಗಿ, ಅವರ ಕರುಣೆಯಿಂದ ಪ್ರೇರಿತನಾಗಿ, ಸಹಾಯ ಪಡೆದು ಸಾಗಿದರೆ ಜೀವನ ಸಾಫಲ್ಯ ಉಂಟಾಗದೇ?

ಕುಮಾರವ್ಯಾಸನ ಕಾವ್ಯವೆಂದರೆ ಕನ್ನಡದಲ್ಲಿ ಬರೆದ ಭಾರತ. ಸಂಸ್ಕೃತ ಭಾರತವನ್ನು ಕನ್ನಡಿಸಿದ್ದು; ಕನ್ನಡಿಸುವುದೆಂದರೆ ಕನ್ನಡದ ಕೊರಲಿನಿಂದ ಉಸುರುವುದು; ಕನ್ನಡನಾಡಿಗರಿಗೆ ತಿಳಿಯುವಂತೆ ಅವರ ಬಳಕೆಯ ಕನ್ನಡದಲ್ಲಿ ತಿಳಿಯಾಗಿ ಹೇಳುವುದು. ಆ ಕೆಲಸಕ್ಕೆ ಸಂಸ್ಕೃತ ಭಾಷೆಯನ್ನು ಪ್ರಮುಖವಾಗಿ ಬಳಸಬೇಕಿಂದಿಲ್ಲ; ಅದನ್ನು ಬಿಟ್ಟೇಬಿಡಬೇಕಿಂದಿಲ್ಲ. ರೂಢಿಗನ್ನಡದ ಜಾಡವನ್ನು ಹಿಡಿದು ಸಾಗುವವನು ಗ್ರಾಮ್ಯವನ್ನೂ ಬಳಸಬೇಕಾಗುವದು; ಪಡೆನುಡಿಗಳನ್ನೂ ಕಟ್ಟಬೇಕಾಗುವದು. ಲಾಕ್ಷಣಿಕರ ಕಡೆಗೆ ನೋಡಿದ್ದರೆ ನನ್ನ ಉದ್ದೇಶ ಸಾಧಿಸುತ್ತಿದ್ದಿಲ್ಲ; ವ್ಯಾಕರಣ ಅಲಂಕಾರ ಕವಿಸಮಯಾದಿಗಳ ನಿರ್ಬಂಧದಲ್ಲಿ ನಾನು ಕುಣಿದಿದ್ದರೆ, ದಂಷ್ಟ್ರಾಳಿಯಲಿ

ನವಿಲುಯ್ಯಾಲೆಯನಾಡಿದಂತೆ ಆಗುತ್ತಿತ್ತು. ಇತರ ಕವಿಗಳು ರೂಪಕವನ್ನು ಒಂದು ಅಲಂಕಾರದಂತೆ ಬಳಸುತ್ತಿದ್ದರೆ ನನಗದು ನಾಲಗೆಯ ನಡಿಗೆಯಂತೆ ಸಹಜವಾದುದು, ಸ್ವಾಭಾವಿಕವಾದುದು. ಆದರಲ್ಲಿ ನನ್ನ ಕೈಯನ್ನು ಯಾರೂ ಹಿಡಿಯಲಾರರೆಂದು ಇಂದಿಗೂ ನಾನು ಎದೆತಟ್ಟಿ ಹೇಳುತ್ತೇನೆ.

ನನ್ನ ಈ 'ಮಹಾಕಾವ್ಯ'ದಲ್ಲಿ "ಪದದ ಪ್ರೌಢಿಯ ನವರಸಂಗಳ ಉದಿತವನು ಅಭಿಧಾನಭಾವವ ಬೆದಕಲಾಗದು. ಇದು ವಿಚಾರಿಸೆ ಬರಿಯ ತೊಳಸಿಯ ಉದಕದಂತಿರೆ ಇಲ್ಲಿ ನೋಳ್ಪುದು ಪದುಮನಾಭನ ಮಹಿಮೆ ಧರ್ಮವಿಚಾರ ಮಂತ್ರವನು" ಎಂದು ನಾನು ಹೇಳಿಯೇ ಬಿಟ್ಟಿದ್ದೇನೆ. ಭಾರತದ ಕಥೆಯೆಂದರೆ ನನ್ನ ಎಣಿಕೆಯಲ್ಲಿ ಶ್ರೀಕೃಷ್ಣ ಚರಿತ್ರೆಯೆಂದೂ, ಅದು ಸಕಲ ವೇದದ ತಿರುಳೆಂದೂ ಜನ್ಮಜನ್ಮಾಂತರ ಪಾಪರಾಸಿಯನ್ನು ಸುಡುವ ಸಾಧನವೆಂದೂ ತಿಳಕೊಂಡವನು ನಾನು. ಶ್ರೀಕೃಷ್ಣನೆಂದರೆ ದ್ವಾಪರಯುಗವನ್ನು ನಡೆಯಿಸಿದ ಸೂತ್ರಧಾರ; ಐದನೆಯ ವೇದವನ್ನು ನುಡಿದ ದೇವರ್ಷಿ. ಆದ್ದರಿಂದ ಶ್ರೀಕೃಷ್ಣನೇ ಕ್ಷೀರಸಾಗರದಲ್ಲಿ ಶಯನಿಸುವ ಶ್ರೀಮನ್ನಾರಾಯಣ; ಆದಿಸಿದ್ಧ; ನಿರಾಕೃತಿಯ ಪರಬ್ರಹ್ಮರೂಪಿನ ತಾತ; ವಿಶ್ವರೂಪವಿಹಾರಿಯಾದ ಮುರವೈರಿ; ಮನದ ಬಗೆ ಮುಟ್ಟದ ಮಹಾ ಮಹಿಮ; ಅಲಸಿಕೆಯಲ್ಲೈನೂರು ಸಾವಿರ ನಳಿನಭವರಡಗಿದರೆಂಬಗ್ಗಳಿಕೆಯ ಅಚಿಂತ್ಯ; ಅವತಾರಗಳನ್ನು ಸ್ವೀಕರಿಸಿ ಭೂದೇವಿಯ ಭಾರವನ್ನಿಳಿಸುವ ದಾನವಧ್ವಂಸಿ; ಧರ್ಮ-ಯಜ್ಞ-ಸತ್ಯ-ಭಕ್ತಿಗಳನ್ನು ಸಂರಕ್ಷಿಸುವ ಸನಾತನ ಪುರುಷ. ಈ ಜಗತ್ತು ಮುರಾರಿಯ ಲೀಲೆಗೋಸುಗ ಉದಯವಾಗಿದೆ. "ವಿಶ್ವಶಿಲ್ಪದ ಕುಶಲಹಸ್ತನೂ ವಿಶ್ವರಕ್ಷೆಯ ಮಂತ್ರವಾದಿಯೂ, ವಿಶ್ವಸಮಿಧೆಗಳಗ್ನಿಕಾರ್ಯದ ಬ್ರಹ್ಮಚಾರಿ ವಟುವೂ ಆಗಿರುವನಲ್ಲದೆ ವಿಶ್ವನಾಟಕ ಸೂತ್ರಧಾರನೂ, ವಿಶ್ವವಿಸ್ಮಯದೈಂದ್ರಜಾಲಕನೂ, ವಿಶ್ವದಂತರ್ಜ್ಯೋತಿ ಚೇತನನೂ ಆಗಿದ್ದಾನೆಂದು ಭೀಷ್ಮನು ಸ್ತುತಿಸಿದ್ದು ಯಥಾರ್ಥವದೆ. ಹೀಗೆ ಅದ್ವಿತೀಯ ಚೈತನ್ಯನಾದ ಧರ್ಮಮೂರ್ತಿಯಾದ ಶ್ರೀಕೃಷ್ಣನು ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸಿ ಧರಣಿಯ ಕೊರಗನ್ನು ನಿವಾರಿಸಿ ಧರ್ಮವನ್ನು ಸ್ಥಾಪಿಸುವುದೇ ಅವನ ಲೀಲೆಯ ಉದ್ದೇಶವಾಗಿದೆ ಆದ್ದರಿಂದ "ಎತ್ತ ಲೊಲಿವುದು ಧರ್ಮಬಲ ತಾನತ್ತಲೊಲಿವುದು ದೈವ; ದೈವವದೆತ್ತಲೊಲಿದಿ

ಹುದತ್ತ ವಿಜಯಶ್ರೀಯುದ ಕುಡಿನೋಟ" ಎಂದು ವಿಜಯಮಂತ್ರವನ್ನೂ ಯಶೋರಹಸ್ಯವನ್ನೂ ವಿವರಿಸಲಾಗಿದೆ ಮಹಾಭಾರತದ ಭರತವಾಕ್ಯ ವಂತಿರುವ ಈ ಮಾತನ್ನು ಲಕ್ಷ್ಯದಲ್ಲಿಡಬೇಕಾಗಿದೆ. ಏನೆಂದರೆ—"ಧರ್ಮ ವೆಲ್ಲಿಹುದಲ್ಲಿ ಜಯ; ಸತ್ಕರ್ಮವೆಲ್ಲಿಹುದಲ್ಲಿ ಸಿರಿ; ಸದ್ಧರ್ಮಸಂರಕ್ಷಕರು ಹರಿಧೂರ್ಜಟಿ ಪಿತಾಮಹರು." ಧರ್ಮಹೃದಯರಾದ ಭಕ್ತರು ಮಕ್ಕಳಿಗಿಂತ ಹೆಚ್ಚಿನವರು. ಆದುದರಿಂದ—"ಹೆತ್ತಮಕ್ಕಳು ನಿಲಲಿ, ಭಕ್ತರನಿತ್ತು ಕರೆ; ನೆನೆವವರಿಗೆ ತನ್ನನು ತೆತ್ತು ಬದುಕುವೆನೆಂಬ ಬೋಳೆಯರರಸ!"

ಭಕ್ತವತ್ಸಲನಾದ ಪರಮಾತ್ಮನ ಲೀಲೆಯು ಕಾವ್ಯವಸ್ತುವಾದರೆ ಅದಕ್ಕೆ ಸಾಫಲ್ಯವುಂಟಾದೀತು. ಅದುವೇ ಜೀವನದ ತಿರುಳಾದರೆ ಜನ್ಮ ಸಾರ್ಥಕವುಂಟಾದೀತು. ಆದುದರಿಂದ ಈ ವ್ಯಕ್ತಿತ್ವವನ್ನು ಪೋಣಿಸಿಕೊಂಡು ಬಂದ ಹಾರವನ್ನರಸಿಕೊಳ್ಳುವುದು ಮಾನವನಾದವನ ಮೊದಲ ಕೆಲಸ. ಅದನ್ನು ಪಡೆದುಕೊಂಡ ಮೇಲೆ ನಿರ್ಣಯಿಸಿಕೊಳ್ಳತಕ್ಕುದು ಜೀವಿತ ಕಾರ್ಯ. ಆ ನಿರ್ಣಯದ ಪ್ರಕಾರ ಹಿರಿಯದೇ ಆಗಿರಲಿ, ಕಿರಿಯದೇ ಆಗಿರಲಿ ಹೊತ್ತ ಉದ್ದಿಮೆಯನ್ನು ಸತ್ಯಸುಂದರವಾಗುವಂತೆ ಪರಮಾತ್ಮ ಪೂಜೆಯಾಗುವಂತೆ ಅರ್ಪಣಭಾವದಿಂದ ಮಾಡುತ್ತ ಸಾಗಿದರೆ ಆ ಕೆಲಸವು ಅಜರವೂ ಅಮರವೂ ಆಗದೆ ಇರಲಾರದು. ಮಹಾಭಾರತದ ಹದಿನೆಂಟೂ ಪರ್ವಗಳನ್ನು ಕನ್ನಡಿಸುವ ಹವ್ಯಾಸವನ್ನಿಟ್ಟುಕೊಳ್ಳದೆ, ದಶಪರ್ವಗಳನ್ನಷ್ಟೇ ಆದರೂ ಪರಮಾತ್ಮ ಪ್ರೀತ್ಯರ್ಥವಾಗಿ, ಅವನ ಉದ್ದೇಶವನ್ನು ಅರಿತುಕೊಂಡು ಮಾಡಿ ಮುಗಿಸುವನು ಉದ್ದೇಶವನ್ನೂ ಅರಿಯಿರಾ? ಧೀರನಿಗೆ ವಿಜಯ, ಶ್ರೀ, ಸಾರ್ಥಕ್ಯ ಮೊದಲಾದ ದಿವ್ಯ ವಸ್ತುಗಳು ಪ್ರಾಪ್ತವಾಗುವವು. ಧೀರನೆಂದರೆ ಉದ್ದೇಶಕ್ಕೆ ಆತುರಗೊಳ್ಳದೆ, ಎತ್ತಲಾರದ ಭಾರವನ್ನು ಹೊತ್ತುಕೊಳ್ಳದೆ ಕಾರ್ಯವು ಸಾಧಿಸದಿದ್ದರೂ ಅಷ್ಟೇ, ಸಾಧಿಸಿದರೂ ಅಷ್ಟೇ ಎಂಬ ಸ್ಥಿರ-ಮನಸ್ಸಿನಲ್ಲಿ ಕಾರ್ಯರತನಾದವನು.

ಕಟ್ಟಕಲಿಯುಗದಲ್ಲಿಯೂ ದ್ವಾಪರದ ಮಹಿಮೆಯನ್ನುಣ್ಣಬೇಕೆನ್ನುವವನು ಭಾರತವನ್ನೋದಲೇಬೇಕು; ಉತ್ಸಾಹಗೆಟ್ಟು, ಬಾಳು ಬೇಸರಾದಾಗ ಭಾರತವನ್ನು ಪಠಿಸಿ ಉತ್ಸಾಹಪೂರಿತನಾಗಿ ವೀರಕರ್ಮಕ್ಕೆ ನಡುಗಟ್ಟಲು

ಅಣಿಯಾಗಬೇಕು "ಭಾರತ ಕಣ್ಣಲಿ ಕುಣಿವುದು, ಮಿಂಚಿನ ಹೊಳೆ ತುಳುಕಾಡುವುದು" ಎಂದು ಆಧುನಿಕ ಕವಿಗಳ ಅನುಭವವು ಸಂಪೂರ್ಣ ಸತ್ಯವಾದುದಾಗಿದೆ ಅಂಥ ಜೀವನವೇನೋ ಕನ್ನಡಿಗರಿಗೆ ಬೇಕಾಗಿದೆ; ಆದರೆ ಅದನ್ನು ಸಾಧಿಸಿಕೊಳ್ಳುವ ದುಡಿಮೆ ಮಾತ್ರ ಬೇಡವಾಗಿದೆ. ದುಡಿಮೆ ಬೇಡವಾದರೆ ಹಿರಿಯ ಜೀವನದ ಆಶೆಯೂ ಇರಕೂಡದು. ಕನ್ನಡಿಗರೇ, ಇದು ಸಂಧಿಕಾಲ; ಅಂದರೆ ಸುಸಂಧಿಯೇ. ಕೃಷಿ ಮಾಡಿರಿ, ಜೀವನ ಕೃಷಿ ಮಾಡಿರಿ. ಅದೇ ದಿವ್ಯ ಕರ್ಮ, ಮಹಾಜೀವನ ಕಾವ್ಯವೆಂದು ನನ್ನ ನಮ್ರ ಅಭಿಪ್ರಾಯ

ಇಂತು — ಕನ್ನಡ ವೀರನಾರಾಯಣನ

**ಕರಣಿಕ ನಾರಣಪ್ಪ**

---

೬

# ಸಿದ್ಧರಾಮನ ಸಮತೆ

ಕನ್ನಡನಾಡಿನ ಕಪಿಲಸಿದ್ಧಮಲ್ಲಿಕಾರ್ಜುನನ ಮಕ್ಕಳೇ,

ಭಾವ ಬಲಿದಲ್ಲಿ ಲಿಂಗವೆಂದೆನಿಸಿತ್ತು. ಭಾವ ವಿಭಾವವಾದಲ್ಲಿ ಪಾಷಾಣವೆಂದೆನಿಸಿತ್ತು. ಭಾವ ನಿರ್ಭಾವವಾದಲ್ಲಿ ಏನೆಂದೆನಿಸದು ನೋಡಾ. ಸರ್ವ ಜಗತ್ತನ್ನು ಶಿವಮಯವಾಗಿ ಕಾಣುವುದು ಸಣ್ಣ ಬುದ್ಧಿಗೆ ಬಿಗಿಯೆನಿಸುತ್ತದೆ ಗುಡಿಗಳಲ್ಲಿ ಪ್ರತಿಷ್ಠೆಗೊಳಿಸಿದ ಲಿಂಗಗಳನ್ನು ಕಲ್ಲೆಂದು ಕಾಣುವ ಬುದ್ಧಿಯು ಮಾಗಿ, ಲಿಂಗಗಳೆಂದು ತೋರಬೇಕಾದರೆ ಭಾವ ಬಲಿಯಬೇಕಾಗುತ್ತದೆ. ಭಾವ ಬಲಿಯುವುದಕ್ಕೆ ಗುಡಿಯೊಳಗಿನ ಮೂರ್ತಿಗಳಲ್ಲಿ ದೇವತ್ವವನ್ನು ಕಾಣುವ ರೂಢಿ ಮಾಡಬೇಕಾಗುತ್ತದೆ. ಒಂದು ಮೂರ್ತಿಯಲ್ಲಿ ದೇವತ್ವವನ್ನು ಕಂಡವನು ನೂರೊಂದು ಮೂರ್ತಿಗಳಲ್ಲಿ ದೇವತ್ವವನ್ನು ಕಾಣಲಾಪನು; ಕೋಟಿ ಮೂರ್ತಿಗಳನ್ನು ಶಿವಲಿಂಗಸ್ವರೂಪದಲ್ಲಿ ಕಾಣಲಾಪನು. ಅದಕ್ಕೆಂತಲೇ ಮೂರ್ತಿ ಬೇಕು; ದೇವಾಲಯ ಬೇಕು. ಜಗದೀಶ್ವರನು ಎಂಬತ್ತುನಾಲ್ಕು ಲಕ್ಷ ಶಿವಾಲಯಂಗಳನ್ನು ಮಾಡಿ ಒಳಗಿಪ್ಪುದನ್ನು ಕಂಡೇ ನಾನು ದೇವಾಲಯ ಕಟ್ಟುವ ಅನುಕರಣವನ್ನು ಕೈಕೊಂಡೆನು. ಎನಗೆ ಇನ್ನಾವ ಸ್ವಾತಂತ್ರ್ಯವಿದೆ?" ಅಣುವಿನೊಳಗೆ ಅಣುವಾಗಿಪ್ಪಿರಿ; ಎಲೆ ದೇವಾ, ನೀವು ಮನದೊಳಗೆ ಘನವಾಗಿಪ್ಪಿರಿ. ಎಲೆ ದೇವಾ, ಜಗದೊಳಗೆಲ್ಲಿಯು ನೀವಿಲ್ಲದೆಡೆಯುಂಟೇ?"

ದೇವಾಲಯದ ಮೂರ್ತಿಯಲ್ಲಿ ಕಾಣುವ ದೇವತ್ವವನ್ನು ಜಗದೊಳಗೆಲ್ಲಿಯು ಕಾಣುವುದಕ್ಕೆ ಕಲಿಯುವ ಶಾಲೆ, ಈ ಲೋಕ. ಈ ಲೋಕಶಾಲೆಯಲ್ಲಿ ಆಡುತ್ತಾಡುತ್ತ ಘನತರವಾದ ಶಿಕ್ಷಣವನ್ನು ಪಡೆಯಲೋಸುಗವೇ ನಾವೆಲ್ಲರಿಲ್ಲಿ ಹುಟ್ಟಿಬಂದುದು ಜಗತ್‌ನಿರ್ಮಾಣವು ದೇವನ ಲೀಲೆ; ಅದನು ಅಣುಗರಾದ ನಾವು ಅರಿತುಕೊಳ್ಳುವುದೂ ಒಂದು ಲೀಲೆ; ಅದು ಜೀವನದ ಲೀಲೆ. "ಲೀಲೆಯದು ಪರಬೊಮ್ಮದಿಚ್ಛೆ; ಇಚ್ಛೆಯದು ಸಕಲ ಜೀವ

ಜಾಲೋತ್ಪತ್ತಿ; ಸಕಲ ಜಾಲೋತ್ಪತ್ತಿಯದು ಜಗದ್ರಚನೆ; ಜಗದ್ರಚನೆ ಯದು ಜಗತ್‌ಪ್ರಳಯ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನ ”

ದೇವದೇವನ ಇಚ್ಛೆಯಿಂದ ಕೂಡಿದ ಈ ಲೀಲೆ ಜಗದ್ರಚನೆಯಿಂದ ಆರಂಭವಾಗಿ ಜಗತ್‌ಪ್ರಳಯದಲ್ಲಿ ಕೊನೆಗೊಳ್ಳುತ್ತದೆ. ರಚನೆಯನ್ನು ಲೀಲೆಯೆನ್ನುವ ಬುದ್ಧಿಯು ಪ್ರಳಯಕ್ಕೆ ಸಹ ಲೀಲೆಯೆನ್ನಲು ಕಲಿಯುವುದಕ್ಕೆ ಸಾಧನೆ ಬೇಕು; ದುಡಿಮೆ ಬೇಕು.—“ ಕೃಷಿಯ ಮಾಡಿ ಉಣ್ಣದೆ ಹಸಿವು ಹರಿವ ಪರಿ ಇನ್ನೆಂತೋ? ಕರ್ಮಯೋಗವ ಮಾಡದೆ ನಿರ್ಮಲ ಸುಚಿತ್ತವ ನರಿವ ಪರಿ ಇನ್ನೆಂತೋ? ಬೇಯದೆ ಅಶನವನುಂಬ ಠಾವಾವುದು ಕಪಿಲ ಸಿದ್ಧಮಲ್ಲಿಕಾರ್ಜುನ ಲಿಂಗಕ್ಕೆ ? ” ಸರ್ವವ್ಯಾಪಕನಾದ ಜಗದೀಶ್ವರನನ್ನು ಕಂಡರಿಯುವುದಕ್ಕೆ ಆತ್ಮಜ್ಞಾನವು ಅವಶ್ಯವಾಗಿದೆ; ಆತ್ಮಜ್ಞಾನವು ನಿರ್ಮಲ ಚಿತ್ತದಿಂದ ಸಾಧ್ಯ; ಚಿತ್ತವು ನಿರ್ಮಲವಾಗುವುದಕ್ಕೆ ಕರ್ಮಯೋಗವು ದಾರಿ. ಕರ್ಮಯೋಗವು ಪರಮಾತ್ಮಪೂಜೆಯೆಂಬ ಬುದ್ಧಿಯಿಂದ ದೈನಂದಿನ ಕೆಲಸಗಳನ್ನು ಮಾಡುವುದರಿಂದ ಕೈಗೂಡುತ್ತದೆಯಲ್ಲವೇ? ಆದರೆ ಚಿತ್ತ ಶುದ್ಧಿಯೆಂದು ಸಾಯುವ ವರೆಗೆ ಕರ್ಮಗಳನ್ನು ಮಾಡುತ್ತಲೇ ಇರಬೇಕೆ, ಎಂಬ ಸಮಸ್ಯೆಯುಂಟಾಗುವುದು ಸಹಜ ಅದು ನಿಜವೇ, ನೂರು ವರುಷವೂ ಒಂದೇ ಪಾಠವನ್ನು ಕಲಿಯುವುದು ವಿದ್ಯಾರ್ಥಿಯ ಪ್ರಗತಿಯ ಲಕ್ಷಣವೇನೂ ಅಲ್ಲ. ಕರ್ಮಯೋಗದ ಕ್ರಿಯೆಗಳಿಂದ ಒದಗಿ ಬರುವ ಚಿತ್ತಶುದ್ಧಿಯು ಜ್ಞಾನವನ್ನು ಕಳೆಗೊಳಿಸುವದು. ಅದರ ನೆರವಿನಿಂದ ಕರ್ಮಲೇಪವಾಗದಂತೆ ಇರುವುದು ಮುಂದಿನ ಪಾಠ. ನಿಜವಾಗಿ ನೋಡಿದರೆ ದೇವದೇವನ ಪೂಜೆ, ಧ್ಯಾನಾದಿಗಳೂ ಒಂದು ವಿಧದಲ್ಲಿ ಕರ್ಮಗಳೇ ಆಗಿವೆ. ಇಷ್ಟಲಿಂಗವನ್ನು ಕೈಯಲ್ಲಿ ಹಿಡಿದು ದೇವತ್ವವನ್ನು ಕಾಣುವ ಪರಿಶ್ರಮವು ಕರ್ಮದ ಪೂಜೆಯಲ್ಲವೇ? ಪ್ರಾಣಲಿಂಗವನ್ನು ಮನದಲ್ಲಿ ನೆನೆದು ಮಾಡುವ ಪರಿಶ್ರಮವು ಕಾಯದ ಕರ್ಮವಲ್ಲವೇ? ಈ ಪ್ರಶ್ನೆಗಳು ನನ್ನೊಳಗೆ ತಲೆ ಯೆತ್ತಿದಾಗ ಪ್ರಭುದೇವರು ಹೇಳಿದ ಸಮಾಧಾನವನ್ನು ಇಲ್ಲಿ ನೆನಪು ಮಾಡಿ ಕೊಡುತ್ತೇನೆ. ಅವರು “ ಚಿನ್ನವನೊರೆಯಬಹುದಲ್ಲದೆ ಬಣ್ಣವನೊರೆಯ ಬಹುದೇ ? ” ಎಂದು ಕೇಳಿದರು. ಹೂವ ಮುಡಿಯಬಹುದಲ್ಲದೆ ಗಂಧವ ಮುಡಿಯಲಿಕ್ಕಾಗದೆಂದು ಉದಾಹರಿಸಿದರು. ಆಮೇಲೆ ಕರ್ಮವ ಮಾಡ

ಬಹುದಲ್ಲದೆ ವಸ್ತುವನರಿಯಲಾಗದೆಂದು ತೀರ್ಮಾನವಿತ್ತರು. ಆ ತೀರ್ಮಾನದ ಮೇಲೆಯೂ ಹಲವು ಆಕ್ಷೇಪಗಳನ್ನೆತ್ತಿದ ನನಗೆ ಸನ್ನೊಳಗೇ ವಿಚಾರಿಸಲಿಕ್ಕೆ ಅನುಜ್ಞೆ ಕೊಟ್ಟರು. ಚಿತ್ತಸಮತೆಯನ್ನರಿಯದ ನನಗೆ ಆ ವಿಚಾರಗಳೆಲ್ಲ ಬಹು ಪ್ರಯಾಸಕರ ಸಿದ್ಧಾಂತಗಳೆಂದು ಮನಗಂಡೆನು. ಅದಕ್ಕಾಗಿಯೇ ಚಿತ್ತಸಮತೆಯನ್ನು ದಯೆಪಾಲಿಸೆಂದು ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಮೊರೆಯಿಟ್ಟೆನು. ನಾನು ಬಯಸಿದ ಚಿತ್ತಸಮತೆ ಎಂಥದೆಂದರೆ—

"ಆರೇನೆಂದರೂ ಓರಂತಿಪ್ಪುದೇ ಸಮತೆ. ಆರು ಜರಿದರೂ ಅವರೆನ್ನ ಮನದ ಕಾಳಿಕೆಯ ಕಳೆದರೆಂಬುದೇ ಸಮತೆ. ಆರು ಸ್ತೋತ್ರ ಮಾಡಿದರೂ ಅವರೆನ್ನ ಜನ್ಮದ ಹಗೆಗಳೆಂಬುದೇ ಸಮತೆ.... ನಿಡುಮುಳ್ಳಿನ ಮೇಲೆ ಎನ್ನನ್ನು ಉರುಳಿಸಿದರೂ, ಹಾವಸೆಯ ಹಾಸಿಗೆಯ ಮೇಲೆ ಹೊರಳಿಸಿದರೂ ಮನ ವಿಸ್ಕಂದವಾಗದ ಸಮತೆ ನನ್ನಲ್ಲೆಂದು ಅಳವಟ್ಟೀತು ದೇವಾ?.... ತಿಳಿಗೇಡಿತನದಿಂದ ಎನ್ನ ಶಿರಸ್ಸಿನ ಮೇಲೆ ಕೈದುವನಿಕ್ಕಿದರೂ, ಗಂಧಾಕ್ಷತೆ ಪುಷ್ಪಗಳಿಂದ ಪೂಜಿಸಿದರೂ ಮನ ವಿಸ್ಕಂದವಾಗದಂಥ ಸಮತೆ ಇನ್ನೆಂದಿಗೆ ನನ್ನಲ್ಲಿ ನೆಲೆಸುವುದು ದೇವಾ?.... ಕೈಹಿಡಿದೆಳೆದೊಯ್ದು ಒಳ್ಳೆಯದನ್ನು ನೀಡಲಿ, ಮಣ್ಣನ್ನು ನೀಡಲಿ ಮನ ವಿಸ್ಕಂದವಾಗದಂತೆ ಸಮತೆಯನ್ನು ಕರುಣಿಸು ದೇವಾ. ಸಿರಿ ಬಂತೆಂದು ಉತ್ಸಾಹದಿಂದ ಉಬ್ಬದೆ, ಕೆಟ್ಟೆತೆಂದು ಮನ ನೊಂದುಕೊಳ್ಳದೆ ಭಿನ್ನನಾಗಿರದಂತೆ ಸಮತೆಯು ಎನ್ನನೆಂದು ಆವರಿಸುವುದೋ."

ಈ ಸಮತೆಗೆ ಸಾಧನೆಯಿದೆ. ಅದನ್ನು ಪ್ರಭುದೇವರು ಅನುಗ್ರಹಿಸಿ ಉಪದೇಶಿಸಿದರು. "ದೇಹಭಾವವಳಿದಲ್ಲದೆ ಜೀವಭಾವವಳಿಯದು. ಜೀವ ಭಾವವಳಿದಲ್ಲದೆ ಭಕ್ತಿಭಾವವಳವಡದು ಭಕ್ತಿಭಾವವು ಅಳವಟ್ಟಲ್ಲದೆ ಅರಿವು ತಲೆದೋರದು. ಅರಿವು ತಲೆದೋರಿದ್ದಲ್ಲದೆ ಕುರುಹು ನಷ್ಟವಾಗದು. ಕುರುಹು ನಷ್ಟವಾದಲ್ಲದೆ ಮಾಯೆ ಹಿಂಗದು ಇದುಕಾರಣ ಕಾಯದ ಜೀವದ ಹೊಲಿಗೆಯಳಿದ ಭೇದವ ತಿಳಿಯಬಲ್ಲರೆ, ಗುಹೇಶ್ವರ ಲಿಂಗದ ಅರಿವು ಸಾಧ್ಯವಪ್ಪುದು."

ಕಾಯದ ಜೀವದ ಹೊಲಿಗೆಯುಳಿವುದೆಂದರೆ, ತ್ರಿಗುಣಾತೀತ ನಾದಂತೆಯೇ. ತ್ರಿಗುಣಾತೀತನು ದೇವಭಾವದ ಸೀಮಿನಲ್ಲಿ ಜೀವನ ಸಾಗಿಸಬಲ್ಲನು ಆಗ ಅವನು ದೇಹ-ಪ್ರಾಣ-ಬುದ್ಧಿಗಳೇ ತಾನೆಂದು ಹೇಳಿ ಕೊಳ್ಳುವುದನ್ನು ಬಿಟ್ಟು, ಅವುಗಳಿಗೊಡೆಯನೆಂದು ಹೇಳಿಕೊಳ್ಳುವ ಅರಿವು ಉಂಟಾಗುತ್ತದೆ ಅಲ್ಲಿಯಿಂದ ಕಾಯದ ಕಳವಳವು ದೂರಾಗುವದು; ಜೀವದ ದುಷ್ಕೃತವು ತೊಲಗುವದು; ಬುದ್ಧಿ ನಿರ್ಮಲವಾಗುವದರಿಂದ ಕಾಯ-ಜೀವ ಎಂಬ ಸೂತಕವು ತೊಳೆಯುವದು. ಈ ಸ್ಥಿತಿಯು ಚಿತ್ತ ನಿರ್ಮಾಲ್ಯವಾದಷ್ಟಕ್ಕೆ ಸಾಧಿಸದು; ಇಷ್ಟದೈವತವನ್ನು ಸಾಕ್ಷಾತ್ಕರಿಸಿ ಕೊಂಡರೂ ಸಾಧಿಸದು. “ನಾನೇ ಈಶ್ವರ”ನೆಂದು ತಿಳಿದವನಿಗೆ ಮಾತ್ರ ಈ ಸ್ಥಿತಿಯು ಕೈಗೂಡುವುದು. “ನಾನೇ ಈಶ್ವರ”ನೆಂಬ ಅರಿವು ಮಹಾ ಜ್ಞಾನದ ಒಂದು ಹಂತ ಮಾತ್ರ. ತನ್ನಲ್ಲಿ ಕಂಡ ವಸ್ತುವನ್ನು ಸರ್ವ ದಲ್ಲಿಯೂ ಕಂಡು, ಸರ್ವವನ್ನು ತನ್ನಲ್ಲಿ ಉಂಡು ಬಾಳು ಬೆಳಗುವುದು ಮುಂದಿನ ಹಂತ ಆಗ ಜೀವನದಲ್ಲಿ ಸಂಧಿಸುವ ಶೋಕ ಮೋಹಗಳು ಸಂಪೂರ್ಣವಾಗಿ ಅಳಿಯುವವು. ಅದುವೇ ಶಿವಯೋಗದ ಪರಮ ಶಿಖರ. ಮನವುಂಟೇ ಶಿವಯೋಗಿಗೆ? ಇಲ್ಲದ ಮನ ಉಂಟೆಂದು ನುಡಿಯುವುದೂ, ಇದ್ದ ಮನ ಅಡಗಿಸಿದೆನೆನ್ನುವುದೂ ಮರುಳುತನವೇ ಅನಿಸುತ್ತದೆ.

“ಅಂಗದಂತೆ ಲಿಂಗ, ಲಿಂಗದಂತೆ ಅಂಗವಾದ ಬಳಿಕ, ಅಂಗದಂತೆ ಲಿಂಗೈಕ್ಯ, ಲಿಂಗದಂತೆ ಅಂಗೈಕ್ಯ. ಮನವೇ ಲಿಂಗ ಲಿಂಗವೇ ಮನವಾದ ಬಳಿಕ, ಮಾತು ಮಾತುಗಳೆಲ್ಲ ಹೊಳ್ಳಾದ ಕಾರಣ ಲಿಂಗೈಕ್ಯವೇ? ಸ್ವರ ಶಬ್ದ ಸಂದಣಿಗೆ ಇನ್ನು ತೆರಹುಂಟೇ? ಕಪಿಲಸಿದ್ಧಮಲ್ಲಿನಾಥ, ಇನ್ನು ನಿಮ್ಮ ದೇವರೆಂದು ಅರಸಲುಂಟೆ?”

ಧೂಳಿಮಾಕಾಳಯ್ಯನೆಂಬ ಹೆಸರು ತೊಟ್ಟು ಭೂಮಿಗೆ ಬಂದವನು ನಾನು. ದಿನಗಳಾದಂತೆ ಬುದ್ಧಿ ಬೆಳೆಯಲಿಲ್ಲ; ಮೊದ್ದುತನ ಮಾತ್ರ ಬೆಳೆ ಯಿತು ಮೊದ್ದರು ಲೌಕಿಕದ ಯಾವ ವ್ಯವಹಾರವನ್ನು ನಿರ್ವಹಿಸಬಲ್ಲರು? ದನ ಕಾಯುವ ಕೆಲಸಕ್ಕೆ ಎಂಥ ಮೊದ್ದುತನವಿದ್ದರೂ ಸಾಗುತ್ತದೆ. ಆಯ್ತು ದನಗಳೇ ನನ್ನ ಒಡನಾಡಿಗಳಾದ್ದರಿಂದ ಅಡವಿಯಲ್ಲಿಯೇ ಇಡಿಯ ಹಗಲು

ಕಳೆಯತೊಡಗಿದೆ. ಮಾನವನೆಂಬವನು ಕಳೆಯಲಿಕ್ಕಾಗದ ನನ್ನ ಮೊದ್ದು ತನವನ್ನು ವಿಶಾಲಸೃಷ್ಟಿಯು ಕಳೆಯಲನುವಾಯಿತು. ಏನು ಆ ರಮ್ಯಸೃಷ್ಟಿ! ಏನು ಆ ವಿಶಾಲ ಮುಗಿಲು! ಆ ಹಸುರೆಲೆಯುಟ್ಟ ಗುಡ್ಡಬೆಟ್ಟಗಳು ನನ್ನ ಮೇಲೆ ತೋರುವ ಅಕ್ಕರೆಯೇನು? ತಿಳಿನೀರಿನ ಚಿಲುಮೆ-ಸೆಲೆಗಳು ನನ್ನ ಕಂಡು ಹಿಗ್ಗಿನಿಂದ ಕುಣಿಯುವುದೆಷ್ಟು? ಬಿಸಿಲಿಗೆ ಬೇಸತ್ತು ನೆರಳಿಗೆ ಹೋದರೆ ಪ್ರತಿ ಒಂದು ಮರವು ಉಸುರುವ ಆ ಕಥೆ ಎಷ್ಟು ಸೊಗಸು; ದನ ಗಳೊಡನೆ ಮೀಯಲಿಕ್ಕೆಂದು ಹಳ್ಳಕ್ಕೆ ಹೋದರೆ ಅದು ನರ್ತಿಸುತ್ತ ಹಾಡುವ ರಾಗವೆಷ್ಟು ಇಂಪು. ಆ ತಾಳ, ಆ ನೃತ್ಯ, ಆ ರಾಗ. ಆ ರೂಪು ಅವೆಲ್ಲವನ್ನೂ ನೆನೆದರೆ ನಾನಂದು ಶಿವನ ಓಲಗದಲ್ಲಿ ಕಾಲಕಳೆದೆನೆಂದು ಬಗೆಯುತ್ತೇನೆ. ಕಲ್ಲುಕಲ್ಲಿನಲ್ಲಿಯೂ ದೇವರು: ಹರಳುಹರಳಿನಲ್ಲಿಯೂ ಲಿಂಗ. ಹೂವಿನರಳು ಭಕ್ತಿ ಕಲಿಸಿತು; ಬಣ್ಣದ ಹೊಗರು ಅನುರಾಗ ಕಲಿಸಿತು. ಗಿಡ-ಮರಗಳು ಭಜನೆ ಕಲಿಸಿದವು. ಬಯಲಡವಿಯಲ್ಲಿಯೂ ಶ್ರೀಶೈಲ ಮಲ್ಲಿಕಾರ್ಜುನನು ಗೋಚರಿಸಿದನು. ಆವು-ಕರುಗಳಿಂದ ದೇವಭಕ್ತರ ನಲುಮೆ ಕಲಿತೆನು. ಸೃಷ್ಟಿಯೆಲ್ಲವೂ ತಾಯಿ-ಮಗುಗಳ ಪ್ರತೀಕವೆನಿಸಿತು. ಎಲ್ಲೆಲ್ಲಿಯೂ ತಾಯ ವಾತ್ಸಲ್ಯ, ವಾತ್ಸಲ್ಯವಿರುವಲ್ಲಿ ಮಗುವಿನ ಹಂಬಲ ಗಿರಿದರಿಗಳಲ್ಲಿ ತಾಯಿ-ಮಕ್ಕಳ ಅಕ್ಕರೆಯು ಸುರಿದರೆ, ಗಿಡಬಳ್ಳಿಗಳಲ್ಲಿ ತಾಯಿ-ಮಕ್ಕಳ ಕಕ್ಕುಲತೆ ಕಂಗೊಳಿಸುವದು ನೀರ ಹೊನಲು ಆವಿನೆಡೆಗೆ ಜಿಗಿಯುತ್ತ ಸಾಗಿದ ಕರುವಿ ನಂತೆ, ಹಿರಿಯ ಪ್ರವಾಹದೆಡೆಗೆ ಧುಮ್ಮಿಕ್ಕುತ್ತಿದೆ ನೀರಿನ ತಿಳಿ, ಮುಗಿಲಿನ ನೀಲಿ, ಗಿಡಗಳ ಹಸಿರು, ಹೂವಿನ ಬೆರಗು, ಮೀನಿನ ಮಿಂಚು, ಗಾಳಿಯ ಕೊಳಲು, ಮುಗಿಲಿನ ಮೊಳಗು ಎದೆಯನ್ನು ಹಿಗ್ಗಿಸಿ, ತಮ್ಮ ಕಥೆಯನ್ನೆಲ್ಲ ನಲ್ಲಿಗೆ ಉಸುರಿದವು. ಮಲ್ಲಿಕಾರ್ಜುನನ ಹೆಚ್ಚುವನ್ನು ಹೇಳಿದವು. ಅಂದಿನ ಆ ಕ್ಷಣಗಳನ್ನು ನೆನೆದರೆ ದೇವನ ಲೀಲೆಗೆ ಅಗಾಧಪಡುತ್ತೇನೆ.—

“ದೇವನಿಂತವನೆಂದು ನಂಬಲಾಗದಯ್ಯಾ. ಬಾ ಎಂದು ಹೇಳಿ ಬಯಲಾದ ದೇವರು ಒಳ್ಳಿದನೇ? ದೇವನಿಂತವನೆಂದು ನಂಬಲಾಗದಯ್ಯಾ. ತನ್ನ ಕಾರ್ಯಕ್ಕೆ ಹೇಗಾಡಿಸಿದ ಒಳ್ಳಿದನೇ? ಕಪಿಲಸಿದ್ಧಮಲ್ಲಯ್ಯಾ ನಿನ ಲೀಲೆ ತಿಳಿಯದಾರಿಂಗೆ!” ಎನ್ನುವಷ್ಟರ ವರೆಗೆ ಸೂಕ್ಷ್ಮಮತಿಯು ನಾನಾ ದೆನು. ದೇವನು ಒಳ್ಳಿದನಲ್ಲವೆಂದು ತೀರ್ಮಾನಿಸುವ ವಿಚಾರವಂತನೂ

ತನ್ನ ಕಾರ್ಯಕ್ಕೆ ಹೆಣಗಾಡಿಸಿದವ ಒಳ್ಳಿದನಲ್ಲವೇ ಅಲ್ಲವೆಂದು ನಿರ್ಣಯಿಸುವ ಬುದ್ಧಿಯ ತೂಕದವನೂ ನಾನಾದೆನೆಂದು ತಿಳಿಯಬೇಡವೇ ? "

ದಾರಿಯಲ್ಲಿ ಮುಂದುವರಿಯುತ್ತಿರಲು ಅನೇಕ ಸಿದ್ಧಿಗಳು ನನ್ನನ್ನು ಬೆಂಬಳಿಸಿದವು; ಸಿದ್ಧರಾಮಾ ಎಂದು ಉದ್ಘೋಷಿಸಿದವು; ಸಿದ್ಧಿಗಳು ತಮ್ಮ ವಿಚಿತ್ರತರವಾದ ವೇಷದೊಡನೆ ಎನ್ನ ಮುಂದೆ ಬಂದು ನರ್ತಿಸಿದವು; ವೈಮಣಿದವು; ತಲೆವಾಗಿದವು; ಅಡ್ಡಬಿದ್ದು ಅಡಿ ಮುಟ್ಟಿದವು; ಸಾಗರಬಿದ್ದೋರಗಿದವು ಅಂಥ ಥಳಕಿಗೆಲ್ಲ ಮರುಳಾಗಿ ನಿಂತಿದ್ದರೆ ಸಿದ್ಧರಾಮನು ಉದ್ದರಾಮನಾಗಿಯೇ ಉಳಿಯುತ್ತಿದ್ದನು; ಉದ್ದರಾಮನಾಗಿಯೇ ಅಳಿಯುತ್ತಿದ್ದನು. ನನ್ನ ಆತ್ಮದ ಸುಕೃತವಶದಿಂದ ಭಕ್ತಿಯ ಬಸವಣ್ಣನವರೂ, ತಿಳುವಿನ ಪ್ರಭುದೇವರೂ, ಬುದ್ಧಿಶಾಲಿ ಚೆನ್ನಬಸವಣ್ಣನವರೂ ನನಗೆ ಕಾಣಿಸಿಕೊಂಡು ಕಲ್ಯಾಣಮಾರ್ಗವನ್ನು ತೋರಿಸಿಕೊಟ್ಟರು; ಕಲ್ಯಾಣಕ್ಕೆ ಕರೆದೊಯ್ದರು; ಕಲ್ಯಾಣದಲ್ಲಿ ನೆಲೆಗೊಳಿಸಿದರು. ಅನುಭವಮಂಟಪದ ಮಹಾವಿದ್ಯಾಲಯದಲ್ಲಿ ನನ್ನನ್ನು ಪರೀಕ್ಷಿಸಿ ಮುಂದಿನ ಅಭ್ಯಾಸವನ್ನು ಹೇಳಿಕೊಟ್ಟರು. ಇಲ್ಲದಿದ್ದರೆ ಗುಡ್ಡರೊಳಗೆ ಹಿರಿಯ ಗುಡ್ಡನಾಗಿ ಒಡ್ಡರ ರಾಮನಂತೆ ಕಲ್ಲೆತ್ತಿ ನಿಲ್ಲಿಸುವುದೂ, ಕಲ್ಲಿನ ಮೇಲೆ ಕಲ್ಲು ಹೇರುವುದೂ ನನ್ನ ಜೀವನ ಕರ್ಮವಾಗುತ್ತಿತ್ತು. ಗುಡಿ ಕಟ್ಟುವ ಒಡ್ಡರಾಮನು, ಮೂರ್ತಿ ಮೂಡಿಸುವ ಸಿದ್ಧರಾಮನಾಗಿ, ಮೂರ್ತಿಯಲ್ಲಿ ದೇವತ್ವವನ್ನು ಪ್ರಕಟಿಸುವ ಕರ್ಮಯೋಗಿಯಾಗಿ, ದೇವನೇ ತಾನೆಂಬ ಏಕರೂಪನಾಗಿ ನಿಲ್ಲುವ ವರೆಗೆ ದೊಡ್ಡನಾದ ಧೂಳಿಮಾಕಾಳಯ್ಯನು ಬಳೆದನು. ಲಿಂಗವಿಲ್ಲದ ಅಂಗವು ಲಿಂಗ ಕಟ್ಟಿಕೊಂಡು ಲಿಂಗಮಯವಾದುದೇನು ಸಾಮಾನ್ಯವಾದ ಲೀಲೆಯೇ? ಅದೆಲ್ಲವೂ ಚೆನ್ನಬಸವಣ್ಣನವರಂಥ ಅಲೌಕಿಕ ಗುರುಗಳಿಂದಲೇ ಸಾಧ್ಯವಾಯಿತು. ಗುರು ಎಂದರೆ ಅವರೊಬ್ಬರೇ ಲೋಕದಲ್ಲಿ. ಕಪಿಲಸಿದ್ಧಮಲ್ಲಿಕಾರ್ಜುನದೇವನನ್ನು ಕಂಡು ಕಾಣಿಸಿಕೊಟ್ಟವರು ಗುರು ಅಲ್ಲದೆ ಇನ್ನಾರು ? ಕಪಿಲಸಿದ್ಧಮಲ್ಲೇಂದ್ರನ ರೂಪು ಎಂದರೆ ಚೆನ್ನಬಸವಣ್ಣನವರು.

ಗುರುವಿತ್ತ ಇಷ್ಟಲಿಂಗವು ಕಳೆದರೆ ಪ್ರಾಣ ಕೊಡಬೇಕೆನ್ನುವ ಹುಚ್ಚುಹುಡುದಿಯ ಬಾಲಕನಾಗಿದ್ದ ನಾನು—" ಲಿಂಗ ಹೋದರೇನು ? ಗುರು

ಉಂಟೆಂಬ ಬಾಲಭಾಷೆಯ ಕೇಳಲಾಗದು. ಕೇಳಿದವನ ಸಂಗಸಿಂಗಿಕಾಳ ಕೂಟ ವಿಷವು. ಆತನ ಸಂಗದಲ್ಲಿರಲು ಪಂಚಮಹಾಪಾತಕ ತಪ್ಪದಯ್ಯ" ಎನ್ನುವ ಛಲವುಳ್ಳವನಾಗಿದ್ದೆನು. ಸರ್ವಜ್ಞನೂ, ಸರ್ವವ್ಯಾಪಕನೂ ಆದ ಜಗದೀಶ್ವರನನ್ನು ತಂದು ನಿಲ್ಲಿಸುವ ಗುರುವಿರಲು ಇನ್ನೊಂದು ಲಿಂಗವನ್ನು ಪಡೆಯಲಿಕ್ಕಾಗುವದಿಲ್ಲವೇ? ಎನ್ನುವ ವಿಚಾರವು ನನ್ನ ಹಿರಿಯ ಶರಣವ-ರೇಣ್ಯರಿಂದಲೇ ನನಗೆ ಲಭಿಸಿತು.

ಗುಡಿ ಕಟ್ಟಿಸಿದ ಸಿದ್ಧರಾಮುನಿಗೂ ಒಂದು ಗುಡಿಯು ನಿರ್ಮಾಣ ವಾಯ್ತು ಸೊನ್ನಲಾಪುರದಲ್ಲಿ! ಅವನು ಗಳಿಸಿದ ಸಮತೆ ಕನ್ನಡಿಗರಲ್ಲಿ ಕಳೆಗೆಟ್ಟ ರೂಪದಲ್ಲಾದರೂ ಕಂಗೊಳಿಸುತ್ತಿದೆ. ಅದಿನ್ನು ಕಳೆಗೊಳ್ಳ ಬೇಕಾಗಿದೆ. ಕಳೆಗೊಂಡ ಸಮತೆ ಕನ್ನಡಿಗರಲ್ಲಿ ಕಾಣಿಸಿಕೊಂಡ ದಿನವೇ ಕನ್ನಡಿಗರ ಕತ್ತಲೆಯ ರಾತ್ರಿ ಕಳೆದು ಹಗಲು ಕಾಣಿಸಿಕೊಳ್ಳುವದು. ಬೆಳಗಾಗಬಂದಿದೆ – ಕತ್ತಲೆ ಜಾರುತ್ತಿದೆ; ಬೆಳಕು ಬೀರುತ್ತಿದೆ. ಶರಣರ ಅವತರಣದ ಇನ್ನೊಂದು ಪ್ರಕರಣವು ಕನ್ನಡನಾಡಗ್ರಂಥದಲ್ಲಿ ಬರೆಯಲ್ಪ ಡುವ ಲಕ್ಷಣಗಳು ಕಂಡುಬರತೊಡಗಿವೆ. ಬರಲಿ—ಬೇಗ ಬರಲಿ.

ಇತಿ—ಕಪಿಲಸಿದ್ಧಮಲ್ಲಿಕಾರ್ಜುನನ
**ಸಿದ್ಧರಾಮು**

---

೭

# ಲಕ್ಷ್ಮೀಶನ ಸಾದಲೀಲೆ

ಕವಿಚೂತವನಸ್ವರೂಪರಾದ ಕನ್ನಡಿಗರೇ,

ನನ್ನ ಕವಿತೆಗೆ ಮಹಾಭಾರತದ ಅಶ್ವಮೇಧ ಪರ್ವವು ಕಥಾವಸ್ತು ವೆಂದು ತಿಳಿದ ಕೂಡಲೇ, ಮುಖ ಮುದುರಿಸಿ ಗ್ರಂಥವನ್ನು ಮುಚ್ಚಿಡುವ ಜನರೇ ಹೆಚ್ಚೆಂದು ತೋರುತ್ತದೆ. ಅಶ್ವಮೇಧವೆಂದರೆ ಸುತ್ತಿ ಸುತ್ತಿ ಬರುವ ಕಾಳಗ, ಶಸ್ತ್ರಾಸ್ತ್ರಗಳ ಪ್ರಯೋಗ, ಭೀಕರ ರಣರಂಗದ ವರ್ಣನೆ, ಬಿಂಕದ ನುಡಿ, ಸತ್ತವರಿಗಾಗಿ ಅಳುವುದು, ನೆತ್ತರು ಮಾಂಸ ಮಜ್ಜೆಗಳ ಬಣ್ಣನೆ ಇವುಗಳಲ್ಲಿಯೇ ತೊಳಲಬೇಕಾಗುತ್ತದೆಂಬ ಕಲ್ಪನೆ ಯಾರಿಗಾದರೂ ಬರು ವುದು ಸಹಜ. ಹಿಂದಿನ ಕವಿಗಳೆಲ್ಲ ಇವನ್ನೇ ವಿವರಿಸಿ ಕವನ ರಚಿಸಿದ್ದಾರೆ; ಲಕ್ಷ್ಮೀಶನೂ ಹಾಗೆಯೇ ಮಾಡಿರಬಹುದೆಂದು ಕಲ್ಪಿಸಿ ನನ್ನ ಕೃತಿಯನ್ನು ಕಡೆಗಣಿಸಬಹುದಾಗಿದೆ. ಆದರೆ ಹಲವು ಸುರಸವಾದ ಉಪಕಥೆಗಳನ್ನು ಆಖ್ಯಾಯಿಸಿದ್ದರಿಂದ ಮೂಲಕಥೆಯು ಹಳಸದೆ, ಹಳೆಯ ಸಂಪ್ರದಾಯಕ್ಕೆ ವಶವರ್ತಿಯಾಗದೆ ಸಾಗಿದೆಯೆಂದು ಧೈರ್ಯವಾಗಿ ಹೇಳಬಹುದು. ಆದರೆ ಮೂಲ ಮಹಾಭಾರತದಲ್ಲಿಯೇ ಇಲ್ಲದ ಚಂದ್ರಹಾಸನ ಕಥೆಯು ನನ್ನ ಕಾವ್ಯಕ್ಕೆ ಮೂಗು ಇದ್ದಹಾಗಿದೆ. ಅದು ಸಾಲಿಗ್ರಾಮಶಿಲೆಯ ಮಹಿಮೆಯ ಕಥೆಯೆಂದು ಹೇಳಲಾಗಿದೆ. ಸಾಲಿಗ್ರಾಮದುಪಲವೇ ಆಗಿದ್ದರೂ ಶ್ರದ್ಧೆಯಿಂ ಪ್ರತಿದಿನದೊಳರ್ಚಿಸುವ ನರನು ಆವ ಸಿದ್ಧಿಯಂ ಪಡೆದಪನೋ, ಎಂದು ಕೇಳುವ ಕಾರಣವೇ ಇಲ್ಲ.

ಕವಿಚೂತವನಚೈತ್ರನ ಕಾವ್ಯದಲ್ಲಿ ಒಳ್ಳೆಯದಾಗಲಿ ಕೆಟ್ಟದಾಗಲಿ ಯಾವುದೂ ಅತಿಯಿಲ್ಲವೆಂದು ರಸಿಕ ವಾಚಕರಿಗೆ ತಿಳಿದಿದೆ. ಅಲಂಕಾರ ಗಳನ್ನು ಬದಲಿಸಿ, ಓದುವವರಿಗೆ ವಿವಿಧತ್ವವನ್ನು ಪ್ರದರ್ಶಿಸಿ, ಚಮತ್ಕಾರ ದಿಂದ ಬೇಸರ ಕಳೆಯುವುದಕ್ಕೆ ಲಕ್ಷ್ಮೀಶನು ನಿಪುಣನೆಂದು ವಿಮರ್ಶಕರು ನಿರ್ಣಯಿಸಿ ಬಿಟ್ಟಿದ್ದಾರೆ. ಅಹುದು ಅದು ಸರಿಯಾದ ಮಾತೇ ಸೈ.

ಅಂತೆಯೇ ಸಮಸ್ತ ಕರ್ನಾಟಕದ ಗ್ರಹಕವಿಯೆನಿಸಿಕೊಂಡಿದ್ದೇನೆ. ಹಳ್ಳಿಯ ಬಡಗುಡಿಸಲುಗಳಲ್ಲಿಯೂ ನಗರಗಳ ಮೇಲಂತಸ್ತಿನಲ್ಲಿಯೂ ಶತಮಾನ ಗಳಿಂದ ಪಂಡಿತರಿಗೂ ಪಾಮರರಿಗೂ ರಂಜನೆಯನ್ನುಂಟು ಮಾಡುತ್ತ ಬಂದ ಜೈಮಿನಿ ಭಾರತದ ಬಗ್ಗೆ ನನ್ನದು ನನಗೇ ಹೆಮ್ಮೆಯೆನಿಸುತ್ತದೆ. ಯಾಕಂದರೆ ಕೃತಿಗೆ ನಾಯಕನಾಗಿ ಅಮರಪುರ ಲಕ್ಷ್ಮೀಶನೇ ನಿಂತಿ ರುತ್ತಾನೆ.

ಜೈಮಿನಿ ಭಾರತವೊಂದು ಕಾವ್ಯಮಹಾರ್ಣವವೆಂದರೆ 'ಸೀತಾ ವನವಾಸ'ವು ಪವಿತ್ರತಮವಾದ ಗಂಗಾನದಿಯೆಂದೂ, ಕವಿವರ್ಯನಿಗೆ ಆಧುನಿಕವಾದ ಪ್ರತಿಭಾಪ್ರಚೋದನೆಯಿದ್ದಿದ್ದರೆ ಅದನ್ನೇ ಒಂದು ಸಣ್ಣ ಕಾವ್ಯವನ್ನಾಗಿ ಬರೆದು ಕನ್ನಡನುಡಿವೆಣ್ಣಿನ ಚೂಡಾಮಣಿಯನ್ನಾಗಿ ಮಾಡಬಹುದಾಗಿತ್ತೆಂದೂ ಒಂದು ಕವಿ ಹೃದಯವು ಹೇಳಿದರೆ, ಇನ್ನೊಂದು ಕವಿ ಹೃದಯವು ದೈವವಿಲಾಸವನ್ನು ಹೇಳುವ ಉತ್ತಮ ಕಥೆಯಾಗಿ ಚಂದ್ರಹಾಸನ ಕಥೆಯು ಜಗತ್ಕಥಾಪ್ರಪಂಚದಲ್ಲಿ ಸೇರ್ಪಡೆ ಯಾಗಿರುವದರಿಂದಲೂ ದೈವಸಹಾಯದಿಂದ ದುಷ್ಟಬುದ್ಧಿಯ ಕುತಂತ್ರ ಗಳನ್ನೆಲ್ಲ ಸಹಜಲೀಲೆಯಿಂದ ದಾಟಿ ಅರಸನಾಗಲು ಹುಟ್ಟಿದ ಪರದೇಶಿ ಮಗುವಿನ ಕಥೆಯಾಗಿರುವದರಿಂದಲೂ ಸಹಜಮಾಧುರ್ಯದ ಸ್ವತಂತ್ರ ಕಾವ್ಯದಂತೆ ಸಂಗ್ರಹಿಸಿ ಬಿಡಬೇಕೆಂದು ಮಾಡಿಯೇ ತೋರಿಸಿಕೊಡುತ್ತದೆ. ಈ ಎರಡೂ ಮಾತುಗಳೂ ದಿಟವಾದವುಗಳೇ. ಗಂಗಾಮಾತೆಯಂಥ ಸೀತಾಮಾತೆಯ ಪಾವಿತ್ರ್ಯದ ಕಥೆಯು ಒಂದೆಡೆಗೆ ತೊಳಗಿದರೆ, ದೇವಶಿಶುವಿನಂಥ ಚಂದ್ರಹಾಸನ ಪರಮಭಕ್ತಿಯು ಇನ್ನೊಂದೆಡೆಗೆ ಬೆಳಗುವದು.

ಗಂಗಾನದಿಯ ವರ್ಣನೆಯ ಪದ್ಯವೊಂದನ್ನು ನೆನಪಿಗೆ ತಂದುಕೊಡು ತ್ತೇನೆ. ಅದನ್ನೋದಿಕೊಂಡು—ಸೀತಾಮಾತೆಯನ್ನು ನೆನಹಿನ ಮುಂದಿರಿಸಿ ಕೊಂಡು ಮತ್ತೊಮ್ಮೆ ಓದಿರಿ. ಆಂದರೆ ಸೀತಾಮಾತೆಯ ಪಾವಿತ್ರ್ಯವು ಗಂಗಾಮಾತೆಯ ಪಾವಿತ್ರ್ಯಕ್ಕೆ ಪಾಸಟಿಯೆಂಬ ಮಾತು ಹೊಳೆಯುವದು. "ಸನ್ನುತ ರಘೂದ್ವಹನ ಕೀರ್ತಿಯೆನೆ, ಮೂವಟ್ಟೆಯನ್ನಡೆದು, ಮುಕ್ಕಣ್ಣನಂ ಸಾರ್ದು, ಮೂಜಗದ ಪಾಪಮಂ ಮುರಿದು ಮುಕ್ಕಿ,

ಮುನ್ನೀರು ಮುಂತಾಗಿ ಮೂದೇವರೊಳಗಾದ ಮುನ್ನುಳ್ಳ ಮೂವತ್ತು ಮೂಕೋಟಿ ವಿಬುಧರಂ ತನ್ನೊಳ್ಮುಳುಗಿದ ರಣಕಿಪ ಪೆಂಪೊದವಿ ಪರಿವ ಬೆಳ್ಪೊನಲ್ ದಿವಿಜನದಿ. ”

ಅದರಂತೆ ಚಂದ್ರಹಾಸನು ದೇವಶಿಶುವೆನ್ನುವುದಕ್ಕೆ ಹುಟ್ಟಿದ ದಿನವೇ ತಾಯ್ತಂದೆಗಳನ್ನು ಕಳಕೊಂಡು ಜಗನ್ಮಾತೆಯ ಉಡಿಯಲ್ಲಿ ಬಿದ್ದವನು. ಚಿಕ್ಕಂದಿನಲ್ಲಿಯೇ ಸಾಕುತಾಯಿಯನ್ನು ಕಳಕೊಂಡು ಸಾಕು, ತಾಯಿಯೆಂದು ಜಗಜ್ಜನನಿಯ ಅಡಿಗೆ ಸೇರಿದವನು. ಪಶುಜೀವಿಗಳಾದ ಚಂಡಾಲರು ದುಷ್ಟಬುದ್ಧಿಯ ಅಪ್ಪಣೆಯನ್ನು ಅನುಸರಿಸಿ ಆತನನ್ನು ಕೊಲೆಗಡಿಯಲು ಅಟ್ಟಾರಣ್ಯಕ್ಕೆ ಕರೆದೊಯ್ಯುವಾಗ ಅವರ ಹೆಗಲ ಮೇಲೆ ಕುಳಿತಕ್ಷಣದಲೇ—‘ಮುರಹರ, ಕೃಷ್ಣ, ಕಮಲಾಕ್ಷ, ಖಗರಾಜಗಮನ ಸಲಹೆಂದು ಕೂಗುವ ವಿಚಾರವು ಬಂದುದು ದಿವ್ಯ ಸಾಲಿಗ್ರಾಮದುಪಲದ ಮಹಿಮೆಯಿಂದಲೇ. ತನ್ನ ತಾಯಿತಂದೆಗಳನ್ನೂ ಒಡಹುಟ್ಟಿದವರನ್ನೂ ಹಂಬಲಿಸದೆ ಮುರಾರಿಯನ್ನೇ ನೆನೆಯುವವನು. ಹರಿಯನ್ನೇ ಜಪಿಸುತ್ತ ಅಳುವ ಬಾಲಕನವನು. ಆದರಿಂದ ಅವನಿಗೆ ಒಡೆಯನೆಂದರೆ ಅಚ್ಯುತನೇ ಸರಿ. ಶಾಲೆಯಲ್ಲಿ ಹರಿಯೆಂಬೆರಡು ವರ್ಣಮಲ್ಲದೆ ಪೆರತನು ಅಕ್ಷಿಯಿಂದ ಈಕ್ಷಿಸದೆ ಬಾಚಿಸದೆ ಇರುವ ಬಾಲಕನು. ಚಂದ್ರಹಾಸನಿಗೆ ಭಕ್ತಿಯೇ ಚಾಪ, ಸತ್ವವೇ ಗುಣ, ತನ್ನ ಬುದ್ಧಿಯೇ ಶರ, ಕೃಷ್ಣನೆ ಗುರಿ. “ಕನ್ಯಾವರಣದೊಳ್ ಕುಲಪರಂಪರೆಯನು ಒರೆಯನಲ್ಕೆ ಶಶಿಹಾಸನು ಎನಗೆ ವಾಮನಗೋತ್ರಂ, ಅರವಿಂದನಾಭಂ ಪಿತಂ, ಹರಿಪಿತಾಮಹಂ, ಮುರಹರಂ ಪ್ರಪಿತಾಮಹಂ” ಎಂದವನು. “ಸಿಕ್ಕಿದೊಡೆ ಕೃಷ್ಣದರ್ಶನದ ಪುಣ್ಯವೇ ಸಾಕು. ಮಿಕ್ಕ ಸುಕೃತದ ಗಸಣಿಯೇಕೆ” ಎಂಬುದು ಇವನ ಮತ. ಶ್ರೀಕೃಷ್ಣನು ಈತನಿಗೆ—“ಧ್ಯಾನಿಸುವನು ಆ ಬಾಲ್ಯದಿಂದ ಎನ್ನನು, ಈತಂಗೆ ಆನು ಒಲಿದೆನು ಎಂದು ನಿಜರೂಪಮಂ” ತೋರಿದನು. ಚಂದ್ರಹಾಸನ ಈ ಸ್ವಭಾವಧರ್ಮವು ದೇವಶಿಶುವಿನದಲ್ಲವೇ? “ತನ್ನ ಮಾರ್ಗ ಗತಿ ಲೇಸು; ಅನ್ಯರೆಸಗುವಂದದೊಳಾಚರಿಸೆ ಭಯಾವಹಂ”. ಆದುದರಿಂದಲೇ ಸತ್ವಗುಣದ ಬೀಡೆನಿಪ ಕಲಿ ಚಂದ್ರಹಾಸ”ನ ಚರಿತ್ರಮಂ ಕೇಳ್ದವರ್ಗೆ ಶತಪತ್ರನಾಭನ ಭಕ್ತಿ

ದೃಢವಾಗಲೆಂದು ಶ್ರೀಹರಿಯು ವರ ಕೊಟ್ಟನು; "ನಿನ್ನ ಚರಿತವನೋದಿ ಕೇಳ್ವವರ್ಗೆಮಿಗೆ ವರ್ಧಿಪುದು ಮುಕುಂದಾಭಿರತಿ ಮುಂದೆ ಕಲಿಯುಗದೊಳ್ ಎನ್ನಾಜ್ಞೆ ಇದು" ಎಂದು ದೇವಿಯು ಒಪ್ಪಿತವನ್ನು ಹಾಕಿದಳು.

ರಘೂದ್ವಹನ ಕೀರ್ತಿಯಂತೆ ಗಂಗಾಮಾತೆಯು ಪ್ರವಹಿಸಿದರೆ, ಸೀತಾಮಾತೆಯು ಬಾಳಹೊಳೆ ಬೆಳಗಿದೆ ಸೀತಾಮಾತೆ ತನಗೆ ಬಂದೊದಗಿದ ಎಡರುಗಳೆಲ್ಲವನ್ನೂ ಗೊಣಗುಟ್ಟದೆ ಸಹಿಸಿದ ಪುಣ್ಯಮಾತೆ. ಆಕೆ ಅಪ್ರತಿಮ ಸ್ತ್ರೀ ಅದ್ವಿತೀಯಳು. ರಾಮಾಯಣವು ರಾಮನ ಕಥೆಯಲ್ಲ, ಸೀತೆಯ ಪುಣ್ಯಶ್ಲೋಕ, ರಾಮನಿಂದ ತನ್ನ ಮೇಲ್ಮೆಯೆಂದು ಸೀತೆ ತಿಳಿದಿದ್ದುದು ಆಕೆಯ ಔದಾರ್ಯ; ಆದರೆ ಸೀತೆಯಿಂದ ರಾಮನಗ್ಗಳಿಕೆಯೆಂಬ ಮಾತು ವಾಸ್ತವಿಕ. ಧುರದೊಳಾಂತರನಿರಿದು ಮೆರೆಯುಲೇರುವ ರಥವು ತರಳೆಯನ್ನು ಕಾನನಕೆ ಕಳಿಸಲು ಸಜ್ಜುಗೊಂಡಿತು; ಧರೆಯೊಳಾರ್ತರನ್ಕಿದೆ ರಕ್ಷಿಸುವ ಬುದ್ಧಿ ಕೋಮಲೆಯ ಕೊಲೆಗೆಲಸಕಾಯ್ತು! ಇದೇನು ಸಣ್ಣಪುಟ್ಟ ಅಪಮಾನವೇ ರಾಮನಿಗೆ? ರಾಮಪುರುಷನು ಸೀತಾಪ್ರಕೃತಿಯನ್ನು ಹೀಗೆ ಅತಿಗಳೆದಂತೆ ಕಾನನಕೆ ಕಳುಹುವುದಾಗಲಿ, ನಿರ್ಜನ ಪ್ರದೇಶದಲ್ಲಿ ಒಬ್ಬಳನ್ನೇ ಬಿಟ್ಟು ಬರುವುದಾಗಲಿ—ಸಹಜದ ಸೌಜನ್ಯದ ಆಚರಣೆಯೆಂದುಕೊಂಡಿರಬಹುದು. ಆದರೆ ಧರ್ಮಸಂಕಟದಲ್ಲಿ ಬಿದ್ದ ರಾಮಾನುಜನು ನಿಜವನ್ನು ಹೇಳುವಾಗ ಅದೆಷ್ಟು ಕುದಿದನೋ; ಅದೆಷ್ಟು ಬೆಕ್ಕಸಬಟ್ಟನೋ ಸಂಪೂರ್ಣವಾಗಿ ನಾವು ತಿಳಿಯಲಾರೆವು. ಆ ವಾರ್ತೆಯನ್ನು ಕೇಳಿ ಸೀತೆಯು—ಗರ್ಭವತಿಯಾಗಿದ್ದ ಸೀತೆಯು—"ಬಿರುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತ ಕದಳಿ ಮುರಿದಿಳೆಗೊರಗುವಂತೆ ಲಕ್ಷ್ಮಣನ ಮಾತು ಕಿವಿದೆರೆಗೆ ಬೀಳುವ ಮುನ್ನ ಹಮ್ಮಯಿಸಿ ಬಿದ್ದಳಂಗನೆ ಧರೆಗೆ ನಡುನಡುಗುತೆ!" ಬರಿಯೆ ಬಿದ್ದು ಬಿಡಲಿಲ್ಲ; ಮೂರ್ಛೆ ಹೋದಳು ಲಕ್ಷ್ಮಣನು ಅವಳನ್ನು ಹಲವು ಬಗೆಯಿಂದ ಉಪಚರಿಸಿದನು. ಗಾಳಿ ಹಾಕಿದನು, ನೆರಳು ಹಿಡಿದನು, ನೀರು ಬಡಿದನು, ಅತ್ತನು, ಕರೆದನು. ಎಲ್ಲಾ ಮುಗಿದ ಮೇಲೆ ಸೀತೆ ಕಣ್ತೆರೆದು "ಕಯ್ಯಾರೆ ಖಡ್ಗಮಂ ಕೊಟ್ಟು ತನ್ನರಸಿಯಂ ಹೊಯ್ಯೆಂದು ಪೇಳದೆ ಅಡವಿಗೆ ಕಳುಹಿ ಬಾ ಎಂದನೆ? ಅಯ್ಯಯ್ಯೊ! ರಾಘವಂ ಕಾರುಣ್ಯನಿಧಿ"

ಎಂದು ಸೀತೆ ಮರುಗಿದಳು. ಕೊನೆಯಲ್ಲಿ--"ಕರುಣಾಳು ರಾಘವನಲ್ಲಿ ತಪ್ಪಿಲ್ಲ. ಕಡುಪಾತಕಂಗೆಯ್ದು ಪೆಣ್ಣಾಗಿ ಸಂಭವಿಸಿದೊಡಲಂ ಪೊರೆವುದೆ-ನ್ನೊಳಪರಾಧಮುಂಟು, ಸಾಕು. ಇರಲ್ವೇಡ ನೀನು, ನಡೆ, ಪೋಗು, ನಿಲ್ಲದಿರ್, ನಿನಗೆ ಮಾರ್ಗದೊಳಾಗಲಡಿಗಡಿಗೆ ಸುಖಂ" ಎಂದು ರಂಬಿಸಿ ಹಿಂದಕ್ಕೆ ಕಳಿಸುವಳು. ಸೀತೆಯ ಸೌಜನ್ಯದಿಂದ ರಾಮನಿಗೆ ಒಮ್ಮೆ ಹಿರಿಮೆಯುಂಟಾಗುತ್ತದೆ; ಇನ್ನೊಮ್ಮೆ ಕೀಳ್ಮೆಯುಂಟಾಗುತ್ತದೆ

ಆದರೆ "ಉರ್ವಿಯೊಳ್ ಕೌಸಲೆಯು ಪಡೆದ ಕುವರಂ ರಾಮ-ನೊರ್ವನೆ ವೀರಂ'' ಎಂದು ಅಶ್ವಮೇಧ ಕುದುರೆಯ ಪಟ್ಟದಲಿಖಿತ-ವನ್ನೋದಿ ಲವನಿಗೆ ತಿರಸ್ಕಾರವುಂಟಾಗುತ್ತದೆ. "ಗರ್ವಮಂ ಬಿಡಿಸದಿರ್ದೊಡೆ ತನ್ನ ಮಾತೆಯಂ ಸರ್ವಜನಮುಂ ಬಂಜೆಯೆನ್ನದಿರ್ದಪುದೆ? ತನ್ನಗುರ್ವ-ತೊಳ್ಗಳಿವೇತಕೆ?" ಎಂದು ಉರಿದೇಳುತ್ತ ಕುದುರೆ ಕಟ್ಟಿಹಾಕುತ್ತಾನೆ. ರಾಮ-ಸೇನೆಯೊಡನೆ ಲವಕುಶರ ಕಾಳಗ, ಅವರ ಸೋಲು, ಕಡೆಯಲ್ಲಿ ರಾಮನ ಪರಾಜಯ ಇವೆಲ್ಲವೂ ಒಂದೊಂದಾಗಿ ರಾಮನಿಗೆ ಅಪಮಾನದ ಪ್ರಸಂಗಗಳೇ. ಸೀತಾಮಾತೆಯು ಕೊನೆಯಲ್ಲಿ ನಿಷ್ಕಲಂಕಿತ ಜಗನ್ಮಾತೆಯಾಗಿ ನಿಲ್ಲುವಳು.

ಚಂದ್ರಹಾಸನ ಕಥೆಯು ಒಂದು ವಿಧದಲ್ಲಿ ಓದುಗರನ್ನು ಪುಲಕಿತಗೊಳಿಸಿದರೆ, ಸೀತೆಯ ಕಥೆಯು ಬೇರೊಂದು ವಿಧದಲ್ಲಿ ರೋಮಾಂಚಕಾರಿಯಾಗಿ ಮುಗಿತಾಯ ಹೊಂದುತ್ತದೆ. ಒಂದು ಹೃದಯವನ್ನು ಹಣ್ಣಿಸುವ ಕೆಲಸ ಮಾಡಿದರೆ, ಇನ್ನೊಂದು ಮಾಸಿದ ತಲೆಯನ್ನು ಮಡಿ ಮಾಡುವ ಕರ್ತವ್ಯವನ್ನು ಕೊನೆಗಾಣಿಸುತ್ತದೆ ಇವೆರಡೂ ಭಾಗಗಳು ನನ್ನ ಕಾವ್ಯದಲ್ಲಿ ಪ್ರಮುಖ ಸ್ಥಾನವನ್ನು ವಹಿಸಿ, ಸೂಕ್ಷ್ಮ ವಿಮರ್ಶೆಗೆ ಈಡಾಗಿ ತೇರ್ಗಡೆ ಹೊಂದಿವೆಯೆಂದು ಹೇಳಿಕೊಳ್ಳುವುದು ಹೆಮ್ಮೆಯ ಕೆಲಸವೇ. ಅಯ್ಯೋ! ನನ್ನ ಕಾಲ ಯಾವುದು? ಈಗಿನ ಕಾಲ ಎಂಥದು? ಆಗಿನ ಕಾಲದ ಮಾನವನಿಗೊಂದು ಪರಿಮಿತಿಯಿತ್ತು. ಇಂದು ಮಾನವನು ಸೀಮಾತೀತನಾಗಿದ್ದಾನೆ. ಇಂದು ಒಂದು ಮೂಲೆಯಲ್ಲಿ ಮೂಡಿ ನಿಂತ ಚುಕ್ಕೆಯನ್ನು ಅಖಿಲ ಜಗತ್ತೇ ಕಣ್ತೆರೆದು ನಿಟ್ಟಿಸುತ್ತದೆ. ಅಂಥ ಕೋಟಿ ಕಣ್ಣುಗಳಲ್ಲಿ

ಕೆಲವೊಂದು ಕಣ್ಣುಗಳಿಗೆ ಕುಂದು ಕಂಡುಬಂದವೆಂದು ಕುಂದುಕ ಕಾರಣ ವಿಲ್ಲ; ಕೊರತೆಗಳು ಕಾಣಿಸಿದವೆಂದು ಕೊರಗುವ ಕಾರಣವಿಲ್ಲ. ಜಗತ್ತಿನ ರಸಿಕರ ಕೈಯಲ್ಲಿ ಪರೀಕ್ಷೆಯ ವಸ್ತುವಾಯಿತೆಂದು ಹಿಗ್ಗುವುದೇ ಸರಿ ಯಾದದ್ದು. ಪರೀಕ್ಷೆಯ ಪರಿಣಾಮ ಹಿರಿದಲ್ಲ; ಪರೀಕ್ಷೆಯ ವಸ್ತುವಾದದ್ದು ಹಿರಿಯ ಮಾತು. ಕರ್ನಾಟಕ ಕವಿಚೂತವನಚೈತ್ರನು ಜಗತ್ತಿನ ಕವಿಚೂತ ವನಕ್ಕೆ ಸೇರುವುದು ಶುಭಲಕ್ಷಣವಾಗಿದೆ.

ಇನ್ನೇನು? ನನ್ನ ನಾದಲೋಲುಪತೆಯನ್ನು ಅನುಕರಿಸಿದ ಆಧುನಿಕ ಕವಿವರರು ಅವೆಷ್ಟೋ ಜಾಗತಿಕ ಕವಿತೆಗಳನ್ನು ರಚಿಸಲು ಸಮರ್ಥರಾಗಿದ್ದಾ ರೆಂಬುದು ಸಾಧಾರಣ ವಿಷಯವಲ್ಲ. ನಾದಮಾಧುರ್ಯದೊಡನೆ ಚಿನ್ನಾದ ಮಾಧುರ್ಯವನ್ನೂ ಹೀರುವ ದೇವದುಂಬಿಗಳು ನನ್ನ ಚೂತವನಕ್ಕೆ ಎಳೆದು ಬರುತ್ತಿರುವುದು ಭಾಗ್ಯವೆಂದೇ ತಿಳಿಯುತ್ತೇನೆ.

ಸೀತಾಮಾತೆಯನ್ನು ಅರಣ್ಯದಲ್ಲಿ ಬಿಟ್ಟು ಬರುವಾಗ ಲಕ್ಷ್ಮಣನು, ಆಕೆಯನ್ನು ಸಂರಕ್ಷಿಸಿರೆಂದು ನಿಸರ್ಗವನ್ನು ಪ್ರಾರ್ಥಿಸಿದ ಕವನವೂ, ಅದರಂಥ ಇನ್ನೂ ಅನೇಕ ಕವನಗಳೂ ಲೋಕಕವಿತೆಯೆಂದು ಮಾನವ ಜಾತಿಯೇ ಎತ್ತಿಕೊಳ್ಳುವುದಾಗಲಿ, ಭವಿಷ್ಯದ ಭವ್ಯಕವಿತೆಯ ಮಾದರಿಯೆಂದು ಆರಿಸಿ ಕೊಳ್ಳುವುದಾಗಲಿ ಅರಿದಲ್ಲ.—"ಎಲೆ ವನಸ್ಥಳಗಳಿರ, ವೃಕ್ಷಂಗಳಿರ, ಮೃಗ ಗಳಿರ, ಕ್ರಿಮಿಕೀಟಂಗಳಿರ, ಪಕ್ಷಿಗಳಿರ, ಲತೆಗಳಿರ, ತೃಣಗುಲ್ಮಂಗಳಿರ, ಪಂಚಭೂತಂಗಳಿರ, ದೆಸೆಗಳಿರ, ಕಾವುದು. ಎಲೆ ಧರ್ಮದೇವತೆ, ಜಗಜ್ಜನನಿ, ಜಾಹ್ನವಿಯೆ, ಸಲಹಿಕೊಳ್ವುದು ತನ್ನ ಮಾತೆಯಂ ಜಾನಕಿಯಂ. ಎಲೆ ತಾಯಿ, ಭೂದೇವೀ, ನಿನ್ನ ಮಗಳಿಹಳ್ ಎಂದು ಸೌಮಿತ್ರಿ ಕೈ ಮುಗಿದನು."

ನನ್ನ ಕಾಲದ ವಿಪ್ರರನ್ನು ಅನುಲಕ್ಷಿಸಿಯೇ "ಕಲಿಯುಗದ ವಿಪ್ರರಾ-ಚಾರವನು ಬಿಡುವಂತೆ" ಎಂದು ಉಪಮಿಸಿ ನನ್ನ ಕಥೆಯನ್ನು ಮುಂದು ವರಿಸಿದ್ದು ನಿಮಗೆಲ್ಲ ನೆನಪಿರಲು ಸಾಕು. ಇಂದು ನಾನು ಬದುಕಿ ಇದ್ದಿದ್ದರೆ, ಅಥವಾ, ಈಗ ಕರ್ನಾಟಕದಲ್ಲಿ ಕವಿಯಾಗಿ ಹುಟ್ಟಿ ಬಂದಿದ್ದರೆ, ಆಚಾರ

ಹೀನರ ಸಲುವಾಗಿಯೇ ಒಂದೊಂದು ಪದ್ಯವನ್ನು ಬರೆಯುತ್ತಿದ್ದೆನೆಂಬುದು ಅಗಾಧದ ಮಾತಲ್ಲ ಒಂದೊಂದು ಕಾವ್ಯವನ್ನೂ ಬರೆಯಬಹುದಾಗಿತ್ತು. ಇದ್ದುದನ್ನು ಇದ್ದಂತೆ ಆಡಿದರೂ ಬುದ್ಧಿಗೇಡಿಯೆನಿಸುವ ಕಾಲವಿದೆಂಬುದು ನನಗೂ ಗೊತ್ತಿದೆ. ಆದರೆ ಆದರ್ಶಭೂತ ವಿಪ್ರರ ಕಥೆಯನ್ನು ಕುರಿತು ಮಹಾಕಾವ್ಯವೊಂದನ್ನು ರಚಿಸಿ, ಆಚಾರಹೀನರಾದ ಕರ್ಮಠರು ತಮ್ಮ ತಾವೇ ನಾಚುವಂತೆ ಮಾಡಲಿಕ್ಕಾಗುತ್ತಿದ್ದಿತು. ಆದರೆ ಆ ಮಾತು ಬೇರೆ ಉಳಿಯಿತು. ಕನ್ನಡಿಗರ ಇಂದಿನ ಹಾರಯಿಕೆಯಂತೆ ಮಹಾಕವಿಗಳು ಜನ್ಮವೆತ್ತಿ ಮಹಾಕಾವ್ಯಗಳನ್ನು ರಚಿಸಿ, ಕನ್ನಡ ಕುಲವನ್ನು ಹೊಸ ತಳಹದಿಯ ಮೇಲೆ ಕಟ್ಟುವುದಕ್ಕೆ ಸಹಾಯಕರಾಗಲಿ ಎಂದು ಹೃದಯ ಪೂರ್ವಕವಾಗಿ ಅಭೀಪ್ಸೆಪಡುತ್ತೇನೆ.

ಇತಿ—ಕರ್ನಾಟಕ ಕವಿಚೂತವನಚೈತ್ರ
ಲಕ್ಷ್ಮೀಶ

---

೮

# ಚೆನ್ನಬಸವನ ಅರಿವು ಆಚಾರ

ಕೂಡಲಚೆನ್ನಸಂಗನ ಕನ್ನಡಿಗರೇ,

ಬಸವನ ಹಿಂದೆ ಬಾಲವಿದ್ದಂತೆ ಮಾವ ಬಸವಣ್ಣನವರ ಬಳಿಯ ಬಾಲನಾದ ನನಗೆ ಅವರೇ ಗುರುವೆಂದೂ, ಇಷ್ಟಲಿಂಗವನ್ನು ದಯೆಪಾಲಿಸಿ ನನ್ನನ್ನು ಉದ್ಧರಿಸಿದ ಮಹಾತ್ಮರೆಂದೂ ಮೊದಲಿಗೆ ಸ್ಮರಿಸುವುದು ನನ್ನ ಕರ್ತವ್ಯವಾಗಿದೆ ಭಕ್ತ ಬಾಕುಳಿಯಾದ ಬಸವಣ್ಣನವರಲ್ಲಿ ಕೂಡಲ ಸಂಗನೊಡನೆ ಸಲುಗೆ, ಮುನಿಸು, ವಿನಯ, ಬೇಡಿಕೆ ಕಂಡುಬಂದರೆ, ನನ್ನ ಮನಸ್ಸಿನ ಜಾತಿಯೇ ಬೇರೆ. ತನ್ನಲ್ಲಿಯೇ ತಿಳಿದು ಬಂಧನಗಳನ್ನು ಕಳಚಿ ಕೊಂಡು ತಾನೇ ತಾನಾಗುವ ವರ್ಗಕ್ಕೆ ಸೇರಿದವನು ನಾನು. "ತನ್ನ ತಾನರಿದಡೆ ತಾನೇ ಚಿನ್ಮಯನಾದ ಪರಬ್ರಹ್ಮ ನೋಡಾ. ತಾನೇ ಚಿನ್ನಾದ ಚಿದ್ಬಿಂದು ಚಿತ್ಕಳಾ ಮೂರ್ತಿ ನೋಡಾ. ತಾನೇ ಸಕಲ ಚೈತನ್ಯ ಚಿತ್ಸೂತ್ರಧಾರಿ ತನ್ನಿಂದಧಿಕ ಪರದೈವವಿಲ್ಲ ನೋಡಾ. ತಾನೇ ಸಚ್ಚಿ ದಾನಂದ ಸ್ವರೂಪವಾದ ಚಿದ್ಘನಲಿಂಗ ನೋಡಾ." ಈ ತಿಳಿವು ಪ್ರಕೃತಿ ಧರ್ಮವಿರುವಲ್ಲಿ ಸುಲಭವಲ್ಲದಿದ್ದರೂ ಸಹಜದ ಮಾತಾಗಬಲ್ಲದು. ಭಕ್ತಿಗೆ ಹುಚ್ಚು ಹೊಳೆಯೆಂದು ಹೆಸರಿಟ್ಟ ಮಾತ್ರಕ್ಕೆ ಅದರ ಪ್ರಾಪ್ತಿಯು ಸಹಜ ವಾಗಲಾರದು. ಆದಕ್ಕೆ ಅಂತರಂಗ ಶುದ್ಧಿ ಅತ್ಯಂತ ಆವಶ್ಯಕವಾಗಿರುವಂತೆ ತಿಳಿಯಾದ ತಿಳವಿಗೂ ನಿರ್ಮಲಾಂತಃಕರಣವೊಂದಿದ್ದರೆ ಸಾಕಾಗದು; ನಿರ್ಮಲ ಚಾರಿತ್ರ್ಯವೂ ಅನಿವಾರ್ಯವಾದದ್ದು "ಬ್ರಹ್ಮದ ಮಾತನಾಡಿ ಕನ್ನೆಯರ ಕಾಲದೆಸೆಯಲ್ಲಿ ಕುಳಿತಲ್ಲಿ ಬ್ರಹ್ಮದ ಮಾತು ಅಲ್ಲಿ ನಿಂದಿತ್ತು" ಎಂದು ಅಂಬಿಗರ ಚೌಡಯ್ಯ ಶರಣರು ಬಾಯಿಬ್ರಹ್ಮದವರಿಗೆ ಒಳಿತಾಗಿ ಏಟು ಕೊಟ್ಟಿದ್ದಾರೆ ಲಿಂಗ ಗಂಭೀರನಾದ ಶರಣ ಅಂಗ ವಿಕಾರವ ನರಿಯನಯ್ಯ. ಜಂಗಮ ಸನ್ಮತನಾದ ಶರಣ ಇಂದ್ರಿಯ ವಿಕಾರವನರಿಯ ನಯ್ಯ. ಲಿಂಗ ಗಂಭೀರನಾಗಿ ಮನ್ಮನದಲ್ಲಿ ಲೀಯವಾಗಿತ್ತು. ಜಂಗಮ

ಸನ್ಮತನಾಗಿ ಅವಧಾನವನರಿಯುನಯ್ಯ ಕೂಡಲ ಚೆನ್ನಸಂಗಯ್ಯನಲ್ಲಿ ಐಕ್ಯ ವಾದ ಮಹಾಶರಣ ” ಅಂತಜ್ರ್ಞಾನ ಮಾರ್ಗವನ್ನು ಅವಲಂಬಿಸಿ ಸತ್ಯ ವನ್ನು ಸಾಕ್ಷಾತ್ಕರಿಸಿಕೊಳ್ಳಬೇಕಾಗಿದೆ. ಮಾಯಾ ಪ್ರಪಂಚಿಯು ಬಹಿ ರ್ಮುಖವಾದ ಮನಸ್ಸನ್ನು ಅಂತರ್ಮುಖಗೊಳಿಸಿ ಅವಿರಳ ಜ್ಞಾನಿಯಾಗ ಲಿಕ್ಕೂ, ಮನವನ್ನು ಮಹದಲ್ಲಿ ನಿಲ್ಲಿಸಿ ಮುಕ್ತನಾಗಲಿಕ್ಕೂ ಉಪಾಯುಗಳಿವೆ.

ಹೊರಗಿನ ದೇವರನ್ನು ಧ್ಯಾನಿಸಿ ಅವನ ಸ್ವರೂಪವನ್ನು ಅರಿಯುವುದು ಬಿಗಿಯಾದ ಮಾತು. “ಅನ್ಯಭಾವವ ನೆನೆಯದೆ ತನ್ನೊಳಗೆ ತಾನೇ ಎಚ್ಚರವಿರಬಲ್ಲರೆ ತನ್ನಲ್ಲಿಯೇ ತನ್ಮಯ ಗುಹೇಶ್ವರಲಿಂಗ”ವೆಂದುಮರಿ ಶ್ರೀ ಅಲ್ಲಮ ಪ್ರಭುಗಳು ಮಾರ್ಗದರ್ಶಕರಾಗಿದ್ದಾರೆ. ಆ ಮಾತು ನಿಜವೂ ಅಹುದು. “ಹೃದಯಕಮಲದಲ್ಲಿ ಲಕ್ಷ್ಯವಿಟ್ಟು ನೋಡುವ ದೇವರು ದೇವರಲ್ಲ; ಭ್ರೂಮಧ್ಯದಲ್ಲಿ ಲಕ್ಷ್ಯವಿಟ್ಟು ನೋಡುವ ದೇವರು ದೇವರಲ್ಲ; ನಾಸಿಕಾಗ್ರ ದಲ್ಲಿ ಲಕ್ಷ್ಯವಿಟ್ಟು ನೋಡುವ ದೇವರು ದೇವರಲ್ಲ; ಅಖಂಡ ಗೋಳವಾಗಿಹ ಲಿಂಗವು ತಾನೆಂದರಿದಡೆ ತಾನೇ ದೇವ.”

ಹೇಳುವುದಕ್ಕೆ ಸುಲಭವಾದಷ್ಟು, ಈ ವಿಷಯವು ಸಾಧಿಸುವದಕ್ಕೆ ಸುಲಭವಾಗಿಲ್ಲ. ಅಂತೆಯೇ ಸಾವಿರಕ್ಕೊಬ್ಬ ಸತ್ಯ; ಲಕ್ಷಕ್ಕೊಬ್ಬ ಭಕ್ತ; ಕೋಟಿಗೊಬ್ಬ ಶರಣ. ಹಾಗಾದರೆ ಉಳಿದ ಜನಜಂಗುಳಿಗೆಲ್ಲ ಏನು ಹೇಳುವುದು? ಬಟ್ಟಬಯಲೆಲ್ಲ ಗಟ್ಟಿಗೊಂಡಡೆ, ಸ್ವರ್ಗ ಮರ್ತ್ಯ ಪಾತಾ ಳಕ್ಕೆ ಠಾವಿನ್ನೆಲ್ಲಿಹುದೋ? ಮೇಘಜಲವೆಲ್ಲ ಮುತ್ತಾದಡೆ ಸಪ್ತಸಾಗರಂಗ ಳಿಗೆ ಉದಕವಿನ್ನೆಲ್ಲಿಹುದೋ? ಕಷ್ಟಜೀವಿ ಮನುಜರೆಲ್ಲ ನೆಟ್ಟನೆ ಶಿವ ಜ್ಞಾನಿಗಳಾದಡೆ ಮುಂದೆ ಭವದ ಬಳ್ಳಿಗೆ ಬೀಜವಿನ್ನೆಲ್ಲಿಹುದೋ?

ಕಷ್ಟಜೀವಿ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾಗುವುದು ಸುಲಭದ ಮಾತಲ್ಲ. ಆ ದಾರಿಯಲ್ಲಿ ಅವೆಷ್ಟು ವಿಘ್ನಬಾಧೆಗಳು? ಅವೆಷ್ಟು ವಿಪತ್ತು ಸಂಕಟಗಳು? ಅವೆಲ್ಲವುಗಳೊಳಗಿಂದಲೂ ಹಾಯ್ದು ಪಾರಾಗಿ ಹೋಗುವು ದಕ್ಕೆ ಅತಿಶಯವಾದ ಧೈರ್ಯವಿರಬೇಕು. “ನಿಧಾನವನಗೆವೆನೆಂದು ಹೋದರೆ ವಿಘ್ನಬಪ್ಪುದು ಮಾಬುದೇ ಅಯ್ಯ? ಸದಾಶಿವನ ಪೂಜಿಸುವೆನೆಂದು ಹೋದರೆ ತರುಬಿ ಹಿಡಿವವಯ್ಯ ಸಕಲ ವಿಪತ್ತುಗಳು. ಎಡೆ ಭಂಗವಿಲ್ಲದೆ

ಲ್ಲಬಲ್ಲಡೆ ಸದಮಲಸುಖವನೀವ ನಮ್ಮ ಕೂಡಲಚೆನ್ನಸಂಗಮದೇವರು.”
ವಿಘ್ನಬಾಧೆಗಳು ಯಾವವು? ವಿಪತ್ತು ಸಂಕಟಗಳು ಎಂಥವು? ಇವುಗಳನ್ನು
ಸ್ಪಷ್ಟಗೊಳಿಸದಿದ್ದರೆ ವ್ಯರ್ಥ ಬೆದರಿಕೆ ಹಾಕುವ ಪ್ರಯತ್ನವನ್ನೇ ಮಾಡಿ
ದಂತಾದೀತು. ಶಿವಶರಣನು ಊರೊಳಗಿದ್ದರೆ ಉಪಾಧಿಕನೆನಿಸಿಕೊಳ್ಳ
ಬೇಕಾಗುತ್ತದೆ; ಅಡವಿ ಸೇರಿದರೆ ಮೃಗವೆಂದೆನಿಸಿಕೊಳ್ಳುತ್ತಾನೆ; ಹೊನ್ನು
ಬಿಟ್ಟರೆ ದರಿದ್ರನೆಂದೂ, ಹೆಣ್ಣು ಬಿಟ್ಟರೆ ನಪುಂಸಕನೆಂದೂ ಹೆಸರಿಡಿಸಿಕೊಳ್ಳು
ತ್ತಾನೆ. ಮಾತಾಡದಿದ್ದರೆ ಮೂಕನೆನ್ನಲಿಕ್ಕೂ, ಮಾತನಾಡಿದರೆ ಜ್ಞಾನಿ
ಕೀಕಯ್ಯ ಮಾತು ಎನ್ನಲಿಕ್ಕೂ ಜನರು ಹಿಂದೆಮುಂದೆ ನೋಡುವದಿಲ್ಲ.
ಸಜವ ನುಡಿದಾಗ ನಿಷ್ಠುರನೂ ಸಮತೆಯ ನುಡಿದರೆ ಅಂಜುಬುರಕನೂ
ಎನಿಸುವನು. ಆಗ ಶರಣನಿಗೆ ಯಾವ ದಾರಿ? ಜನಮೆಚ್ಚುವಂತೆ ನುಡಿ
ಯುವುದನ್ನೂ ನಡೆಯುವುದನ್ನೂ ಬಿಟ್ಟುಕೊಟ್ಟು, ಮನಮೆಚ್ಚುವ ಮಾರ್ಗ
ದಲ್ಲಿ ನಡೆಯುವನು; ಆ ಮೇಲೆ ನುಡಿಯುವನು. ಜನರನ್ನು ಮೆಚ್ಚಿಸುವ
ಹುಚ್ಚು ಸೇರಿದರೆ ಶರಣನು ಕಾಡು ಸೇರುವನು; ಮನವನ್ನು ಮೆಚ್ಚಿಸುವ
ಕೆಚ್ಚು ಸೇರಿದರೆ ಶರಣನು ಊರಲ್ಲಿಯೇ ನೆಲೆನಿಂತು ನಿಜೈಕ್ಯ ಲಿಂಗಸಾಧನೆ
ಯಲ್ಲಿ ನಿರತನಾಗುವನು.

ಶಿವಾನುಭವಮಂಟಪದಲ್ಲಿ ಭಕ್ತಜನಗಳಿಗೆ ಷಟ್‌ಸ್ಥಲ ಸಿದ್ಧಾಂತವನ್ನು
ಬೋಧಿಸುವ ಕೆಲಸ ನನ್ನದಾಗಿತ್ತು. ಪ್ರಭುದೇವರು ಷಟ್‌ಸ್ಥಲವನ್ನು
ಮೀರಿದ ಪುರುಷೋತ್ತಮರಾದ್ದರಿಂದ ಅವರ ಕಣ್ಣರಿಕೆಯಲ್ಲಿ ನಾನು ಉಪಾ
ಧ್ಯಾಯನಾಗಿ ಕೆಲಸ ಮಾಡುತ್ತಿದುದನ್ನು ನೀವು ಬಲ್ಲ ವಿಷಯವಾಗಿದೆ.
ಅದರ ಫಲವಾಗಿ ಷಟ್‌ಸ್ಥಲಸಿದ್ಧಾಂತಕ್ಕೆ ಸರಿಯಾದ ತಳಹದಿಯಾದರೂ
ಬಿದ್ದಿತೆನ್ನಬೇಕು. ಆ ಉಪಾಧ್ಯಾಯವೃತ್ತಿಯನ್ನು ಸಫಲವಾಗಿ ಜರುಗಿಸುವ
ಸಾಮರ್ಥ್ಯ ಬಂದುದು ಪ್ರಭುದೇವರ ಆದರ್ಶದಿಂದಲೇ. ನಾನು ಕಲ್ತು
ಕೊಂಡಿದ್ದಂತೂ ಪ್ರಭುದೇವರಿಂದಲೇ ಎಂಬುದನ್ನು ಎಂದೋ ಹೇಳಿದ್ದೇನೆ.–
“ಹೊನ್ನು ಹೆಣ್ಣು ಮಣ್ಣು ಬಿಟ್ಟು ಮಂಡೆಯ ಬೋಳಿಸಿಕೊಂಡು ಬೋಳಾದ
ಬಳಿಕ ನಿರಾಸಕ್ತನಾಗಿ ಶಿವಧ್ಯಾನಪರಾಯಣನಾಗಿಪ್ಪುದೀಗ ಪ್ರಥಮ
ಬೋಳು. ಲಿಂಗಾಣತಿಯಿಂದ ಬಂದುದ ಕೈಕೊಂಡು ಲಿಂಗ ಸಾವಧಾನ
ವಾಗಿಪ್ಪುದೀಗ ದ್ವಿತೀಯ ಬೋಳು. ಶರಣಸತಿ ಲಿಂಗಪತಿ ಎಂಬುಭಯ

ವಳಿದು ಪರಮಾನಂದದಲ್ಲಿಪ್ಪುದೀಗ ತೃತೀಯ ಬೋಳು. ಬೋಳಿನ ಅನುವ ಕೂಡಲಚೆನ್ನಸಂಗಯ್ಯನಲ್ಲಿ ಅಲ್ಲಯ್ಯ ಬಲ್ಲ." ಆದರೆ ವೇಷಭೂಷಗಳಿಗೆ ಅದೆಷ್ಟೇ ಬೆಲೆಯಿದ್ದರೂ ಅವನ್ನೆಲ್ಲ ಗೌಣವೆಂದೆಣಿಸಿ ಸಾಕಾರದಲ್ಲಿ ಸನ್ನಿತನೂ, ನಿರಾಕಾರದಲ್ಲಿ ನಿರತನೂ, ಪರಮಾರ್ಥದಲ್ಲಿ ಪರಿಣಾಮಿಯೂ ಆಗ ಬೇಕಾಗಿದೆ. "ತುರುಬಾಗಲಿ, ಜಡೆಯಾಗಲಿ, ಬೋಳಾಗಲಿ ಅರಿವು ಆಚಾರ ವುಳ್ಳಡೆ ಜಂಗಮ" ಎಂಬ ಮಾತನ್ನು ಮರೆಯಲಿಕ್ಕಾಗದು. ಅಂತರಂಗದ ಅರಿವೂ, ಬಹಿರಂಗದ ಆಚಾರವೂ ಸಮರಸವಾಗಿ ಸೇರ್ಪಡೆಯಾಗುವುದೇ ಜಂಗಮ ಲಕ್ಷಣ. ಬರಿಯ ಜ್ಞಾನವೂ ಅಪೂರ್ಣವಾಗಿರುವಂತೆ, ಬರಿಯ ಆಚಾರವೂ ಅಪೂರ್ಣವೇ ಸರಿ. ಈ ಒಂಟಿಕಾಲಿನ ಕುಂಟು ಹೆಜ್ಜೆಗೆ ಕರ್ಮದ ಬೆಳಸು ಅನ್ನುತ್ತಾರೆ. "ಮರ್ಮವರಿಯದೆ ಮಾಡುವ ಮಾಟ ಕರ್ಮದ ಬೆಳಸು, ಸುಯಿಧಾನದ ಕೇಡು ಕೂಡಲಚೆನ್ನಸಂಗಯ್ಯನ ಶರಣರ ಅನುವರಿದು ಮಾಡುವ ಮಾಟ ಲಿಂಗಜಂಗಮದ ಕೂಟ, ಭವಭಂಗದೋಟ"

ಪ್ರಭುದೇವರು ಶಿವಾನುಭವಮಂಟಪದ ಅಧ್ಯಕ್ಷರು. ಅವರ ಕಣ್ಣರಿಕೆಯಲ್ಲಿಯೇ ಶರಣರ ಅನುಭಾವ ಪರೀಕ್ಷೆ ನಡೆಯುತಕ್ಕದು. ಅವರ ನೆರವಿನಿಂದಲೇ ನೆಲೆ ಕಂಡವರು ಅಸಂಖ್ಯಾತರು. ಮಲೆತು ನಿಂತ ನೀರನ್ನು ಮುಂದುವರಿಯಹಚ್ಚಿ ತಿಳಿಗೊಳಿಸಿ ಸಾರ್ಥಕವೆನಿಸಿದವರು ಅಲ್ಲಮಪ್ರಭುಗಳೇ ಸರಿ. ಅಂಥ ಪ್ರಭುದೇವರನ್ನು ಹಿಂದಿರಿಸಿ, ಸಿದ್ಧರಾಮದೇವರು ಈ ಚೆನ್ನಬಸವನನ್ನು ಒಮ್ಮೆ ಬಹುವಾಗಿ ಓಲೈಸಿದ್ದಾರೆ. ಅದು ತುಸು ಬೆಳೆಸಿ ಆಡಿದ ಮಾತೆಂದು ನಾನು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಳ್ಳುತ್ತೇನೆ. ಈಗಿನ ವಿಮರ್ಶಕರು ಅದನ್ನು ಒರೆಗೆ ಹಚ್ಚಿ ಮನಗಾಣಲೆಂದು ಆ ಮಾತನ್ನಿಲ್ಲಿ ವಿವರಿಸುತ್ತೇನೆ—

"ಎಲ್ಲರ ವರ್ಣಿಸಬಹುದು. ಎನ್ನ ನಲ್ಲ ಗುರುದೇವನ ವರ್ಣಿಸಬಾರದು ಅಲ್ಲನ ನುಡಿಸಬಹುದು. ಎನ್ನ ನಲ್ಲ ಕಪಿಲಸಿದ್ಧಮಲ್ಲಿಕಾರ್ಜುನನ ರೂಪು — ಚೆನ್ನಬಸವನ ನುಡಿಸಿ ಗೆಲ್ಲಬಾರದು ಖುಲ್ಲತನದಿಂದಾದರೂ ಕಲ್ಲಯ್ಯ."

ಜ್ಞಾನದಿಂದ ಬಲ್ಲಿದನಾಗಿದ್ದೆನೆಂದುಕೊಂಡರೂ ನಾನು ಭಕ್ತರಿಗೆ ಹೆಚ್ಚಿನ ಸ್ಥಾನವನ್ನು ಸಲ್ಲಿಸಿದವನು. ಭಕ್ತನೆಂದರೆ ಎಂಥವನು? ನನ್ನ ಎಣಿಕೆಯಲ್ಲಿ—"ಭಕ್ತನು ಶಾಂತನಾಗಿರಬೇಕು ತನ್ನ ಕುರಿತು ಬಂದ ತಾವಿನಲ್ಲಿ ಸತ್ಯನಾಗಿರಬೇಕು. ಭೂತಹಿತ ವಚನವ ನುಡಿಯಬೇಕು. ಸಕಲ ಪ್ರಾಣಿಗಳ ತನ್ನಂತೆ ಭಾವಿಸುವುದು. ಗುರು-ಲಿಂಗ-ಜಂಗಮಕ್ಕೆ ತನು-ಮನ ಧನಗಳ ಸವೆಯಿಸಬೇಕು. ಅಪಾತ್ರದಾನವ ಮಾಡಲಾಗದು. ಸಕಲೇಂದ್ರಿಯಂಗಳ ತನ್ನ ವಶವ ಮಾಡಬೇಕು ಇದೇ ಮೊದಲಲ್ಲಿ ದೇಹ ಶೌಚ ನೋಡಾ. ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ, ಇದೇ ಸಾಧನ ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ." ಷಟ್‌ಸ್ಥಲ ಮಾರ್ಗದಲ್ಲಿ ಇದು ಮೊದಲ ಹೆಜ್ಜೆ. ಈ ಹೆಜ್ಜೆ ಸರಿಯಾದ ರೀತಿಯಲ್ಲಿ, ಸರಿಯಾದ ಸ್ಥಳದಲ್ಲಿ ಬಿದ್ದಿತಾದರೆ ಮುಂದಿನ ದಾರಿ ಸುಗಮ—ಸುಲಭವಾಗುತ್ತದೆ.

ಈ ಪ್ರಥಮ ಪಾಠದಿಂದ ಅಂತರಂಗವು ಶುದ್ಧವಾಗುತ್ತಲೂ, ಶುದ್ಧ ವಾದ ಪ್ರಕೃತಿಯಲ್ಲಿ ಪರಮಾತ್ಮಶಕ್ತಿಗಳು ಇಳಿದು ಬಂದು ಕಾರ್ಯಕಾರಿ ಯಾಗುತ್ತಲೂ ಸಾಗಿಸಾಗಿದಂತೆ ಶುದ್ಧಿಯೂ, ದಿವ್ಯಶಕ್ತಿಯ ಅವತರಣವೂ ಹೆಚ್ಚಾಗುತ್ತ ಹೋಗುತ್ತದೆ. ಬರುವ ದಿವ್ಯಶಕ್ತಿಯನ್ನು ಸ್ವಾಗತಿಸಿ ಸ್ಥಳ ಕೊಡುವ ಬುದ್ಧಿಯೂ, ಅದನ್ನು ಬರಗೊಡಿಸುವ ಸಂಕಲ್ಪವೂ ದೃಢತರ ವಾಗಿರಲುಬೇಕು. ಈ ನೆಲೆಯಲ್ಲಿ ಒಟ್ಟಾರೆ ಪಾಲಿಸತಕ್ಕ ಸಾಮಾನ್ಯ ನಿಯಮಗಳಿಗೆ ಶೀಲವೆನ್ನುತ್ತಾರೆ. ಶೀಲದ ಸಾಮಾನ್ಯ ನಿಯಮ್ನಗಳನ್ನು ತಿಳಕೊಳ್ಳುವ ಕುತೂಹಲವು ಯಾರಿಗಾದರೂ ಇರುವುದು ಸ್ವಾಭಾವಿಕ ವಾಗಿದೆ. "ಇದ್ದುದ ವಂಚನೆ ಮಾಡದಿಪ್ಪುದೇ ಶೀಲ. ಇಲ್ಲದುದಕ್ಕೆ ಕಡನಮಾಡದಿಪ್ಪುದೇ ಶೀಲ. ಪರಧನ ಪರಸ್ತ್ರೀಯರ ಮುಟ್ಟದಿಪ್ಪುದೇ ಶೀಲ ಪರದೈವಪರ ಸಮಯಕ್ಕೆ ಅಳುಪದಿಪ್ಪುದೇ ಶೀಲ. ಗುರುನಿಂದೆ ಹರನಿಂದೆ ಚರನಿಂದೆ ಕೇಳದಿಪ್ಪುದೇ ಶೀಲ. ನಮ್ಮ ಕೂಡಲ ಚೆನ್ನಸಂಗನ ಶರಣರ ಬರವಿಂಗೆ ಮೈಯ್ಯಾಂತುದೇ ಅಚ್ಚ ಶೀಲ."

ಷಟ್‌ಸ್ಥಲದ ಅರ್ಥವನ್ನು ಒಂದೇ ಮಾತಿನಲ್ಲಿ ಹೇಳಬೇಕೆಂದರೆ—"ಒಡಲುಗೊಂಡು, ಒಡಲುವಿಡಿಯದೆ, ಒಡಲಿಲ್ಲದ ನಿಜವ ಬೆರೆಸುವುದು."

" ಕಾಯವಿಲ್ಲದ ಸಂಸಾರ ಚೋದ್ಯ, ಕಾಯದೊಳಗೆ ನಿರಾಳ ಚೋದ್ಯ. ನಿರಾಳದೊಳಗೊಂದು ಕೂಡಲಚೆನ್ನಸಂಗಯ್ಯನೆಂಬ ಶರಣ ಸಮ್ಯಕ್ ಚೋದ್ಯ. ಮಹಾಚೋದ್ಯ."

ಭಕ್ತಸ್ಥಳದಲ್ಲಿಯೇ ಸಾಧಕನ ಪರೀಕ್ಷೆ ಆಗುತ್ತದೆ, ಭವಿಯೋ—ಭಕ್ತನೋ ಎಂಬುದು ನಿರ್ಣಯವಾಗುತ್ತದೆ. ಭವದ ಬಳ್ಳಿಯ ಬೀಜವೋ, ಬಸವಣ್ಣನ ಭಕ್ತಿಯ ಬಳ್ಳಿಯ ಕೊನರೋ ತಿಳಿದುಬರುತ್ತದೆ. ಮತ ಪ್ರಚಾರಕಾರ್ಯವೇನಂದರೆ — ಸಂಖ್ಯೆ ದೊಡ್ಡದು ಮಾಡುವುದಲ್ಲ. ಆದನ್ನು ಸ್ವಲ್ಪವೇ ಜನರಲ್ಲಾದರೂ ಆಳವಾದ ಮನವರಿಕೆ ಮಾಡಿಕೊಡುವುದು. ಸಂಖ್ಯೆಯ ಬೆನ್ನುಹತ್ತಿದರೆ ಸಂಖ್ಯೆ ದೊಡ್ಡದಾಗುವುದು ಅರಿದಲ್ಲ; ಆದರೆ ಆ ವಿದ್ಯೆಯು ನಿರ್ಗಂಧವಾಗುತ್ತದೆ. " ಕಬ್ಬುನದ ಶುನಕವ ತಂದು ಪರುಷವ ಮುಟ್ಟಿಸಲೊಡನೆ ಹೊನ್ನ ಶುನಕನಪ್ಪುದಲ್ಲದೆ, ಪರುಷವಾಗಲರಿಯದು ನೋಡಾ! ಲೋಕದ ಮಾನವನ ತಂದು ಭಕ್ತನ ಮಾಡಿದೊಡೆ ವೇಷಲಾಂಛನೀಯಹನಲ್ಲದೆ ಭಕ್ತನಾಗಲರಿಯ ನೋಡಾ. ಇದು ಕಾರಣ ಕೂಡಲಚೆನ್ನಸಂಗಮದೇವಯ್ಯ ಮಜ್ಜನಕ್ಕೆರೆದ ಭವಿಗಳನೆಂತು ಭಕ್ತರೆಂಬೆನಯ್ಯ." ಸತ್ಯವಿಲ್ಲದ ಭಕ್ತಿ ಹತ್ತುಸಾವಿರ ಕಾಲ ಮಾಡಿದರೂ ಫಲವಿಲ್ಲ; ನಿಷ್ಠೆಯಿಲ್ಲದ ಪೂಜೆಯನೇಸು ಕಾಲ ಮಾಡಿದರೂ ಫಲವಿಲ್ಲ. ಯಾವುದಕ್ಕೆ ಫಲವೆನ್ನಬೇಕು? ಭಕ್ತಿ-ಪೂಜೆಗಳಿಂದ ಭಾವ ನೆಲೆಗೊಳ್ಳಬೇಕು. ಭಾವದ ನೆಲೆಯೆ ಭಕ್ತಿಪೂಜೆಗಳಿಗೆ ಫಲ. ಅದರಂತೆ ನಿಜವಿಲ್ಲದ ಪ್ರಸಾದವನೇಸು ಕಾಲ ಕೊಂಡರೇನು? ಅಭ್ಯಾಸವಾಯಿತಲ್ಲದೆ ಸಹಜವಲ್ಲ—ಸಮ್ಮತವಲ್ಲ. ಒಬ್ಬರ ಕಂಡು ಒಬ್ಬರು ಮಾಡುವರಲ್ಲದೆ ತಮ್ಮ ತಾವು ವಿಚಾರಿಸಲರಿಯರು. ಇವರಿಗೆ ಭಕ್ತಮಹೇಶ್ವರರೆಂದು ಎಂದೂ ಅನ್ನಲಾಗದು.

ಷಟ್‌ಸ್ಥಲದ ಉಪಾಧ್ಯಾಯನಾದ ನಾನು ಆ ಆರೂ ಸ್ಥಲಗಳ ಮುಖ್ಯ ಲಕ್ಷಣಗಳನ್ನು ನೆನಪು ಮಾಡಿಕೊಡುವುದು ಕರ್ತವ್ಯವೆಂದು ತಿಳಿದಿದ್ದೇನೆ. " ಭಕ್ತನಾದಡೆ ಕಿಂಕರರ ಕಿಂಕರನಾಗಿರಬೇಕು. ಮಹೇಶ್ವರನಾದಡೆ ಆದಿಯನಾದಿಯ ಅರಿದಿರಬೇಕು. ಪ್ರಸಾದಿಯಾದಡೆ ಒಡಲೊಳಗಣ ದುರ್ಗುಣವಿರಹಿತನಾಗಿರಬೇಕು. ಪ್ರಾಣಲಿಂಗಿಯಾದಡೆ ಬಾಹ್ಯ

ವಿಚಾರವಿಲ್ಲದಿರಬೇಕು. ಶರಣನಾದಡೆ ನಿಸ್ಸಂಗಿಯಾಗಿರಬೇಕು. ಐಕ್ಯನಾದರೆ ಬಯಲು ಬಯಲಾಗಿರಬೇಕು.'' ಈ ಸ್ಥಲಭೇದವನ್ನು ಅರಿಯದಿದ್ದರೆ ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ ಸುಸಂಗವೇದ್ಯನೆಂದೆನಿಸಲಾಗುವದಿಲ್ಲ. ಈ ಬಗೆಯ ಶಿವಪ್ರಪಂಚವನ್ನರಿತ ಲಿಂಗೈಕ್ಯ ಸಂಸಾರಿಗೆ ಅರಿಯಲಿಲ್ಲದ ಅರಿವು, ಮರೆಯಲಿಲ್ಲದ ಮರೆಹು, ನೋಡಲಿಲ್ಲದ ಬೆರಗು ನಿಂತುಬಿಡುವದು. ಗತಕಾಲದ ವೈಭವವನ್ನೂ, ಆತ್ಮಸಂಪತ್ತನ್ನೂ, ಜೀವನದ ಬೆಳಕನ್ನೂ ಬಯಸುತ್ತಿರುವ ಕನ್ನಡಿಗರು ಅಲ್ಲಲ್ಲಿ ಕಂಡುಬರುತ್ತಿದ್ದಾರೆ. ಅಂಥವರಿಗೆ ೧೨ನೆಯ ಶತಮಾನದ ಶರಣರ ಆಂದೋಲನದಿಂದುಂಟಾದ ವಿಪುಲ ಆಸ್ತಿಯು ಕನ್ನಡಿಗರಿಗೆ ಇಂದಿಗೂ ಕಲ್ಯಾಣಕಾರಿಯಾಗಿರುವದಲ್ಲದೆ, ಮುಂದಿನ ದಾರಿಗೆ ಸೊಗಸಾದ ಬುತ್ತಿಯಾಗಬಹುದಾಗಿದೆ.

ಇಂತು—ಅರಿವು ಆಚಾರದ ಕನ್ನಡಿಗ,

**ಚೆನ್ನಬಸವಣ್ಣ**

---

# ಹೊನ್ನಮ್ಮನ ಹದಿಬದೆ

ಕನ್ನಡ ತಂದೆಗಳಿರಾ,

ಇನ್ನೂರೈವತ್ತು ವರುಷ ಗತಿಸಿದರೂ ನನ್ನ ಸಣ್ಣ ಕೃತಿಯನ್ನು ಹೊನ್ನ ಕೆಲಸವೆಂದು ಕಾಣುತ್ತಿರುವುದು ಕನ್ನಡಿಗರ ಉದಾರಂತಃಕರಣವೇ ಸರಿ. ನಾನು ಹೆಣ್ಣಿಗಿಂತಲೂ ಹದಿಬದೆಯ ಧರ್ಮಕ್ಕೇ ಹೆಚ್ಚು ಮಹತ್ವ ಕೊಟ್ಟಿರುವೆನೆಂಬುದು ಸತ್ಯವೇ ಸರಿ ಆದರ ಶ್ರೇಯಸ್ಸೆಲ್ಲವೂ ಚಿಕ್ಕದೇವ ರಾಯ ಒಡೆಯರಿಗೇ ಸೇರಬೇಕು. ನಾನೊಂದು ಅವರ "ಒಡವೆ." ವಿದ್ಯಾಗುರುಗಳಾದ ಅಳಸಿಂಗಾಚಾರ್ಯರು ಶ್ರುತಿಗೂಡಿಸಿದ ವೀಣೆ ನಾನು. "ಹೊನ್ನಿಬಾ! ಹೊನ್ನಮಬಾ!! ಕಂದ! ಕಟ್ಟಾಣಿ! ಸಾಹಿತ್ಯದ ವರ ದೇವತೆ" ಎಂದು ಕಡ್ಡಿಯನ್ನು ಗುಡ್ಡದಂತೆ ಕಂಡು ಪ್ರೋತ್ಸಾಹಿಸಿದ್ದರಿಂದ ನನ್ನ ಅಲ್ಪವಾದ ಕಾವ್ಯಸೆಲೆಯು ಪ್ರವಹಿಸಿತು. ಮುನ್ನಿನ ಹಿರಿಯರು ಉಸುರುತ್ತ ಬಂದ ನುಡಿಗಳನ್ನೇ ನನ್ನ ಮಾತಿನಲ್ಲಿ ತೊದಲುತ್ತ "ಎಲ್ಲರುಂ ಅರಿಯುವಂತೆಳವಾತು" ಗಳಲ್ಲಿ ನುಡಿದಿದ್ದೇನೆ; ಅದನ್ನು ನೀವು "ಸರಸ ಸಾಹಿತ್ಯ"ವೆಂದು ಹೊಗಳಿದ್ದೀರಿ. ನಾನಾಡಿದ ನುಡಿ ಅಂದಿನ ಕಾಲಕ್ಕೆ ಹೊಂದಿಕೆಯಾಯ್ತು; ಅದರಲ್ಲಿಯ ಸತ್ಯವು ಎಂದಾದರೂ ಶಾಶ್ವತವೇ ಆದರೂ, ಅದಕ್ಕಿಂದು ಕಾಣಿಯನ್ನು ಕಟ್ಟಿ ಸರಿಪಡಿಸಲು ಯತ್ನಿಸುತ್ತೇನೆ; ಆಲಿಸಬೇಕು

"ಕುವರನಾದರೆ ಬಂದ ಫಲವೇನು, ಕುವರಿಯಾದರೆ ಬರುವ ಕುಂದೇನು ?" ಈ ಮಾತು ಅದೆಷ್ಟೇ ನಿಜವಾದರೂ ಕುವರನು ಕುಲಕ್ಕೆ ಕೀರ್ತಿ ತರುವಂಥವನಾಗಬೇಕಾದರೆ, ಅವನು ಬಹು ಸಂಸ್ಕಾರ ಹೊಂದ ಬೇಕಾಗುತ್ತದೆ. ಆದರೆ ಕುವರಿಯಾದವಳನ್ನು ಒಳ್ಳೆವರನಿಗಿತ್ತ ಮಾತ್ರಕ್ಕೆ ಅವಳು ಕುಲಕೋಟಿಯನ್ನೇ ಉದ್ಧರಿಸಬಲ್ಲಳು. ಹೆಣ್ಣು ಸ್ವಾಭಾವಿಕ ವಾಗಿಯೇ ಅಬಲೆ; ಅವಳನ್ನು ಶಿಕ್ಷಣಾದಿಗಳಿಂದ ಅದೆಷ್ಟು ಸಂಸ್ಕಾರಗೊಳಿ

ಸಿದರೂ ಆಕೆ ಕೋಮಲೆಯೇ ಸರಿ. ನಾರಿಯು ಪುರುಷನೊಡನೆ ಹೋರಾಡಿ ಅದೆಷ್ಟು ಸಮಾನತೆಯನ್ನು ಸಂಪಾದಿಸಿದರೂ, ಸೃಷ್ಟಿಯು ಅವಳಲ್ಲಿ ಗರ್ಭ ಕೋಶವನ್ನಿರಿಸಿದ್ದರಿಂದ ಅವಳು ಕೆಲವೊಂದು ಅವಧಿ ಮನೆಯಲ್ಲಿಯೆ ಇದ್ದು ಕೊಂಡು ಗೃಹಿಣಿಯಾಗಬೇಕಾಗುತ್ತದೆ; ಮಕ್ಕಳನ್ನು ಆರೈಸುವ ಹಾಲಿನ ಬಟ್ಟಲುಗಳನ್ನು ಅವಳಲ್ಲಿಯೇ ನಿಸರ್ಗವು ನಿರ್ಮಿಸಿದೆ; ಅದಕ್ಕಾಗಿ ಅದೊಂದು ಕರ್ತವ್ಯವು ಬಿಡಲಾರದ ಕರ್ಮವಾಯಿತು; ಎಳೆಮಕ್ಕಳೊಡನೆ ದಿನದ ಬಹು ಭಾಗವನ್ನು ಕಳೆಯುವುದು ಅವಳಿಗೆ ಅನಿವಾರ್ಯ. ಮನೆಯೊಂದು ಅವಳಿಗೆ ನಿಲಯವಾಯ್ತು. ಮಕ್ಕಳ ಆರೈಕೆಯೊಡನೆ ಅವುಗಳ ಆರೋಗ್ಯ, ಶಿಕ್ಷಣ, ಭೋಜನ, ಸ್ವಚ್ಛತೆ ಮೊದಲಾದವುಗಳು ಆಕೆಯನ್ನು ತಾವಾಗಿಯೇ ಬೆಂಬಳಿ ಸುತ್ತವೆ. ಈ ಕೋಲಾಹಲದಲ್ಲಿ ಬಹುಶಃ ಉದರಪೋಷಣೆಗಾಗಿ ಗಳಿಸಿ ತರಲಿಕ್ಕೆ ಅವಳಿಗೆ ವೇಳೆ ಸಿಗದು; ಅದನ್ನು ಪತಿ ಮಾಡಬೇಕು. ಗಳಿಸಲಿಕ್ಕೆ ಹೋಗುವವರಿಗೆ ಸಕಾಲಕ್ಕೆ, ಪೋಷಣಾರ್ಹವಾದ ಆಹಾರವನ್ನು ಒದಗಿಸಿ ಕೊಡುವುದೂ, ದುಡಿದು ದಣಿದು ಬಂದವರಿಗೆ ವಿಶ್ರಾಂತಿ ಸ್ವಸ್ಥತೆಗಳನ್ನು ಉಂಟುಮಾಡುವದೂ, ಒದಗಿಸಿಕೊಡುವದೂ ಮಡದಿಯ ಪಾಲಿಗೆ ಬರುವ ಕೆಲಸ ಇವೇ ಪತಿಯ ಸೇವೆ ಎನಿಸುವವು ಪತಿಯ ಸೇವೆಯಾಗಲಿ, ಪುತ್ರಪೋಷಣವಾಗಲಿ, ಆಕೆಗೆ ಸ್ವಾಭಾವಿಕವಾಗಿರುವಾಗ ಪತಿಗೆ ಸಂಬಂಧಿಸಿದ, ಪತಿಯ ತಾಯ್ತಂದೆಗಳನ್ನು ನೋಡಿಕೊಳ್ಳದಿರಲಿಕ್ಕಾಗುವದೇ? ಹೀಗಾಗಿ ಹೆಣ್ಣಿನ ಪಾಲಿಗೆ ತೊತ್ತುತನವು ತಪ್ಪಿಸಲಿಕ್ಕಾಗದ ಮಾತೆನಿಸಿ ಬಿಟ್ಟಿದೆ. ಅದಕ್ಕೇ ಹದಿಬದೆಯ ಧರ್ಮವೆನ್ನುವುದು. ಆ ಧರ್ಮವನ್ನು "ಇಹಪರದೇಳ್ಗೆವಡೆಯ" ಲಿಕ್ಕೆ ಅನುಕೂಲವಾಗುವಂತೆ ಮಾರ್ಪಡಿಸಿ ಕೊಳ್ಳಬೇಕಾಗುತ್ತದೆ. "ಮನೆಯೇ ಧರ್ಮಾಶ್ರಮ, ಮನೆವಾಳ್ತಿಯೇ ಧರ್ಮ" ಮಾಡಿಕೊಳ್ಳಬೇಕಾಗುತ್ತದೆ.

ಪುರುಷನು ಸಾಧಿಸಬೇಕಾದ ನಾಲ್ಕು ಪುರುಷಾರ್ಥಗಳಿರುತ್ತವೆ; ಸ್ತ್ರೀಗೆ ಪಾತಿವ್ರತ್ಯವೊಂದೇ ಸಕಲಾರ್ಥ ಸಾಧಕವೇ? ಧರ್ಮಾರ್ಥಕಾಮ - ಮೋಕ್ಷ ಗಳನ್ನು ದೊರಕಿಸಬಲ್ಲ ಪತಿಯ ಸಾಧನೆಯು ನಿರಾತಂಕವಾಗಿ ಸಾಗುವಂತೆ ನೆರವಾಗುವುದು, ನಿಷ್ಕಾಮಕರ್ಮಿಯೆನಿಸುವ ನಲ್ಲೆಯ ಹೊಣೆಯಾಗುತ್ತದೆ. ತ್ಯಾಗಿಯಾದ ಸತಿಯು ತಾನು ಹೊತ್ತ ಹೊಣೆಯಲ್ಲಿಯೇ ಧರ್ಮಾರ್ಥಕಾಮ

ಮೋಕ್ಷಗಳನ್ನು ಕಂಡುಕೊಳ್ಳುತ್ತಾಳೆ. "ಇನಿಯನ ಸೇವೆಯಲ್ಲಿ ಎಣೆಯಿಲ್ಲದ ಧರ್ಮ; ಮನೆವಾಳ್ತೆಯಲ್ಲಿ ಅರ್ಥಕಾಮ; ಮನದನ್ನನೊಳು ಮಾಧವನ ಭಾವಿಸಿದರೆ ಮೋಕ್ಷ" ಅಲ್ಲದೆ, "ಪತಿಯ ರೂಪದೆ ತನ್ನ ಪಾಲಿಗೆ ಬಂದ ಶ್ರೀಪತಿ"ಯೆಂದೂ, "ಇನಿಯನೂಳಿಗ ದೇವಪೂಜೆ"ಯೆಂದೂ, ಪತಿಯೆಂದರೆ "ಆತ್ಮಪತಿ, ಆತ್ಮವಲ್ಲಭ" ಎಂದೂ ಪರಿಭಾವಿಸುವವಳಿಗೆ, "ಪತಿಯೊಳು ಪರಭಕ್ತಿಗೈವುದು ಲಕ್ಷ್ಮೀಪತಿಯಾಣತಿಯೆಂದು ತೋರುವದರಲ್ಲಿ ಸಂದೇಹವೇನು?" ಮನುಷ್ಯನ ಕರ್ತವ್ಯದ ಬೆಲೆಯು ಅವನು ಯಾವ ಕೆಲಸ ಮಾಡುವನೆಂಬುದರ ಮೇಲಿರದೆ, ಯಾವ ಮನಸ್ಸಿನಿಂದ ಮಾಡುವನೆಂಬುದರ ಮೇಲಿರುತ್ತದೆ.

ಹದಿಬದೆಯ ಧರ್ಮಕ್ಕೆ ಸೇವೆಯೇ ಜೀವಾಳವಾದಂತಾದ ಮೇಲೆ, ಆ ಸೇವೆಯ ಸೂತ್ರಗಳನ್ನು ಅರಿತುಕೊಳ್ಳಲೆಳಸುವುದು ಸಹಜವೇ. ಸತಿಯು ತನ್ನ ಕರ್ತವ್ಯವನ್ನು ನಿರ್ಧರಿಸುವಾಗ 'ಹಿತಾಹಿತ'ಗಳನ್ನು ವಿಚಾರಿಸುವಳು; 'ಶಾಸ್ತ್ರವಿಹಿತ'ವೇ ಎಂದು ಎಣಿಸುವಳು; 'ಮನಕೆ ಸಮ್ಮತ'ವೇ ಎಂದು ಬಗೆಯುವಳು. ಆದುದರಿಂದ ಈ ಧರ್ಮವು "ಉಣದುಡದೊಡಲ ದಂಡಿಸುವ ಆಯಸವಿಲ್ಲದ್ದೂ, ಪಣವ ವೆಚ್ಚಿಸುವ ಪಾಡಿಲ್ಲ"ದ್ದೂ ಆಗಿದೆ; ಅವಳು "ಗನ್ನಗದಕಗಳ ಕಳೆದು, ಗರ್ವವ ಬಿಟ್ಟು, ಹನ್ನಸಗಳನು ಹಬ್ಬಿಸ"ಳು; "ಕವೆ ಕೋಡುಗಳನು ಕಾಣಿಸಳು; ಆರಿ, ಬೊಬ್ಬಿರಿದಾರಭಟಿಯನಾಚರಿಸಳು; ಪೋರಳು; ಪುರ್ಬುಗಂಟಿಕ್ಕಳು; ಪುಸಿಯಳು; ನೋಯಿಸಿ ನುಡಿಸಳು. ಅತಿಭೀತಿಯಿಂದನುಗೆಟ್ಟು ಹಿಂತೆಗೆಯಳು; ಮಿತಿಮೀರಿ ಮೇಲುವರಿಯಳು." "ಪತಿಯೇ ಪರದೇವತೆಯೆಂದು ಭಕ್ತಿಗೈವಳು; ದೊರೆಯೆಂದು ಉಪಚರಿಸುವಳು; ಗುರುವೆಂದು ವಿನಯಗೂಡಿರುವಳು."

ಪತಿಯ ಸನ್ನಿಧಿಯಲ್ಲಿ ವಿನಯಶಾಲಿಯಾಗಿದ್ದರೂ ಅವಳು "ಕಂಡ ಕಂಡವರಲ್ಲಿ ಕಡುದೈನ್ಯವಡೆಯಳು; ಉದ್ದಂಡೆಯೂ ಎನಿಸಳು." ಆದರೆ "ಗಂಡನ ಘನತೆಯಂತೆ ಪೆರ್ಮೆಯನ್ನು ಕೈಕೊಳ್ಳುವಳು." ಗಂಡನೊಡನೆ ಮತಭೇದವಾದಾಗ ಇಲ್ಲವೆ ಗಂಡನ ತಪ್ಪು ಕಂಡುಬಂದಾಗ ಹದಿಬದೆಯು ಹಿಡಿಯುವ ದಾರಿಯೇ ಬೇರೆ. ಏಕಾಂತದಲ್ಲಿ ಹೇಳಿಕೊಳ್ಳತಕ್ಕದ್ದನ್ನು

ಹೇಳಿಕೊಂಡು—"ವಿನಯಿಪೆನಲ್ಲದೆ ನಿಯಮಿಪೆನಲ್ಲೆಂ"ದು ಬಿನ್ನಯಿಸು ವಳು. "ಇನಿಯನು ಕನಲಿ ಕಾಡಿದೊಡೆ ಅದರಿಂದ ನೀನಳವಳಿಯದಿರು; ಒಂದಡಿಯಿಂದ ಒದೆದೊಡೆ ಅದನುಳಿದು ಮತ್ತೊಂದಡಿವಿಡಿದೊಡಬಡಿಸು" ಎನ್ನುವ ಮಾತು ಸತಿಯ ಆಗ್ರಹದ ಮಂತ್ರವೇ ಆಗಿದೆಯೆನ್ನಬೇಕು; ಅದನ್ನೇ ಪುರುಷನು ಆಚರಿಸಬೇಕಾಗಿದ್ದಲ್ಲಿ ಅದು ಸತ್ಯಾಗ್ರಹವೆನಿಸುತ್ತದೆ. ಮಹಾತ್ಮಾ ಗಾಂಧಿಯವರಿಗೆ ಸತ್ಯಾಗ್ರಹವನ್ನು ಕಲಿಸಿದ ಗುರು ದಿ. ಕಸ್ತೂರಬಾನೇ ಎಂದು ಅವರೇ ಬಾಯಿಬಿಚ್ಚಿ ಒಪ್ಪಿಕೊಂಡಿರುವುದು ಕನ್ನಡಿಗರು ಅರಿಯದ ವಿಷಯವಲ್ಲ. ಈ ಅಸ್ತ್ರದಿಂದ ಪತಿದೇವನನ್ನು ಒಲಿಸುವದೇನು ದೊಡ್ಡ ಮಾತಲ್ಲ ಭೂಪತಿದೇವನನ್ನೂ ಹಾದಿಗೆ ತರಬಹುದಾಗಿದೆಯೆಂದು ತೋರಿ ಬರುತ್ತಿದೆ.

ವಿದ್ಯಾ, ಸಂಪತ್ತು, ವಿಜಯ, ಕೀರ್ತಿ, ಅನ್ನ, ಆರೋಗ್ಯ ಮೊದಲಾದವುಗಳಿಗೆ ಸ್ತ್ರೀ ಅಧಿದೇವತೆಯರೇ ಇದ್ದಾರೆನ್ನುವುದಕ್ಕೆ ಸರಸ್ವತಿ, ಲಕ್ಷ್ಮಿ ಮೊದಲಾದ ಹೆಸರುಗಳೇ ಸಾಕ್ಷಿಯಾಗಿವೆ. ಅವರ ಪ್ರತಿನಿಧಿಗಳಂತಿರುವ ಸ್ತ್ರೀಯರು, ಮನೆಮನೆಗೂ ತಾಯಿ, ಮಗಳು, ಅಕ್ಕ, ತಂಗಿ, ಹೆಂಡತಿ ಮೊದಲಾದ ರೂಪಗಳಿಂದ ಕಾಣಿಸಿಕೊಳ್ಳುತ್ತಿದ್ದಾರೆ. ಅವರ ಪ್ರಸನ್ನತಾ ಪೂರ್ಣವಾದ ಸಹಾಯದಿಂದ ಪುರುಷನು ಪುರುಷಾರ್ಥಗಳನ್ನು ಸಾಧಿಸಿ ಕೊಳ್ಳಬಲ್ಲನು, ಗೆಲುವನ್ನು ಗಳಿಸಬಲ್ಲನು; ಕೀರ್ತಿಯನ್ನು ಸಂಪಾದಿಸಬಲ್ಲನು; ಅಖಿಲ ಸಂಪತ್ತುಗಳೂ ಅವನನ್ನು ಸುತ್ತುವರಿಯಬಲ್ಲವು. ರಾಮಕೃಷ್ಣರು ವೈರಾಗ್ಯಮಾರ್ಗದಲ್ಲಿ ಮುಂದುವರಿಯಲು ಅದಕ್ಕೆ ಶಾರದಾದೇವಿಯ ಒಪ್ಪಿಗೆ ಬೇಕಾಯಿತು; ಬುದ್ಧನು ಗೃಹತ್ಯಾಗವನ್ನು ಮಾಡಿದರೂ ಯಶೋಧರೆಯ ಪರಲು ಹರಕೊಂಡು ಹೋಗಲಿಲ್ಲ; ಮಹಮ್ಮದ ಪೈಗಂಬರರಿಗೆ ಅವರ ಅರ್ಧಾಂಗಿಯಿಂದಲೇ ಅರ್ಧ ಶಕ್ತಿ ಬಂತು. "ಎರವೆಳ್ಳನಿತಿಲ್ಲದೊರ್ವ ರೋರ್ವರೊಳೊಡವೆರೆದಿರ್ಪ ಸತಿಪತಿಗಳಿಗೆ, ಸಂಸಾರಸುಖದ ಸುಗ್ಗಿ ದೊರ ಕೊಂಬುದು." ನಾನು ಪತಿವ್ರತೆಯ ಧರ್ಮವನ್ನು ವಿವರಿಸುವುದರೊಡನೆ, ಪತಿಯ ಕರ್ತವ್ಯವನ್ನು ಆರನೆಯ ಪ್ರಕರಣದಲ್ಲಿ ಕಾಣಿಸಿದ್ದೇನೆ. ಅದರಲ್ಲಿ ಪತಿಯಿಂದ ಹೆಣ್ಣು ಹೃದಯವು ಏನು ಬೇಡುತ್ತದೆಂಬುದನ್ನು ಸ್ಪಷ್ಟಪಡಿಸ ಲಾಗಿದೆ. "ಒತ್ತಿಗೆ ಬರಿಸುವುದು, ಒಮ್ಮೊಮ್ಮೆ ಬಿನದವಾಡುತ್ತ ಭೀತಿಯ

ಬಿಡಿಸುವದು; ಮತ್ತೆ ಮೆಯ್ವಳಿಯೊಳು ಮನ್ನಿಸುವುದು; ಚಿತ್ತವೃತ್ತಿಯ ಸೆರೆಯ ಪಿಡಿವುದು." ಈ ಮಾತನ್ನು ಅಲಕ್ಷಿಸುವ ಗಂಡನನ್ನೂ, ಅತ್ತೆಯನ್ನೂ ನಲ್ಲೆಯು ಬಯ್ಯದಿರಲಾರಳು. "ಗಂಡ ಕಲಿಸಿದ ಹಾದರ; ಅತ್ತೆ ಕಲಿಸಿದ ಕಳವು ಎಂಬ ಮಾತು ಸಂಸಾರವೇದದ ಒಂದು ವಚನದಂತೆ ನಮ್ಮ ಹೆಣ್ಮಕ್ಕಳ ಬಾಯಲ್ಲಿ ಇಂದಿಗೂ ನಲಿಯುತ್ತಿದೆ. ಆದಕಾರಣ ಗಂಡನಾದವನು ತನ್ನ ಕೈಹಿಡಿದವಳಿಗೆ ತನು-ಮನ-ಆತ್ಮಗಳಲ್ಲಿ ಅರ್ಧ ಸ್ಥಳವನ್ನು ಕೊಡುತ್ತಿರಬೇಕು, ಆಗ ಅವಳು ಅರ್ಧಾಂಗಿಯಾಗಬಲ್ಲಳು; ಧರ್ಮಪತ್ನಿಯೆನಿಸಬಲ್ಲಳು; ಸಹಧರ್ಮಿಣಿಪದಕ್ಕೇರಬಲ್ಲಳು. "ತನ್ನ ಪೆರ್ಚುಗೆಯೊಳು ಪೆರ್ಚುಗೆಗೊಂಡು, ಉರೆ ತನ್ನ ಕುಂದಿನೊಳು ಕುಂದುವಳನ್ನು, ತನ್ನ ಮೈಯೊಳಗರೆ ಮೈಯೆನಿಸುವ ಮನದನ್ನಳನ್ನು ಮನ್ನಿಪುದೊಲಿದು."

"ಒಲಿದ ನಲ್ಲನ ವಿರಹದೊಳೊರಲುವ ಕುಶ ಲಲನೆಯ ವಿರಹ ವೇದನೆಗೆ ಪಲಬಗೆಯ ಉಗ್ರ ತಪಂಗಳು ಈಡಲ್ಲ" ಎಂಬ ಮಾತು ಅತಿಶಯೋಕ್ತಿಯಾಗಿ ತೋರಬಹುದು. ಪತಿ ಆತ್ಮವಲ್ಲಭನೆಂದೂ ತಾನವನ ಅರ್ಧಾಂಗಿಯೆಂದೂ ತಿಳಿದ ಲಲನೆಯು ಪತಿಯ ರೂಪದಿಂದ ತನ್ನ ಪಾಲಿಗೆ ಬಂದ ಶ್ರೀಪತಿಯ ವಿರಹದಲ್ಲಿ ಪರಿತಪಿಸುವುದು ಭಕ್ತಿಯ ಒಂದು ಜಾತಿಯಲ್ಲದೆ ಇನ್ನೇನು? ಅದೊಂದು ಭಕ್ತಿಯ ಅಶುದ್ಧರೂಪವೆಂದುಕೊಳ್ಳಿರಿ! ಅದು ವಿಶುದ್ಧವಾಗುವ ಕಾಲವೊಮ್ಮೆ ಬರಲಾರದೇ? ಸತಿಯ ಜೀವನವೇ ಒಂದು ತಪಶ್ಚರ್ಯೆ; ಮನೆ-ಮನೆವಾಳ್ತೆಗಾಗಿ ಕಕ್ಕುಲತೆಯಿಂದ ಶ್ರಮಿಸುವುದೇ ಶಾರೀರಿಕ ತಪ; ಮನೆಯವರೊಡನೆ ಮಮತೆಯಿಂದಲೂ, ಸಂತೋಷದಿಂದಲೂ ವರ್ತಿಸುವುದು ಮಾನಸಿಕ ತಪ; ಸತ್ಯವಾದ ಪ್ರಿಯವಾದ ವಚನ, ಮೃದುವಾದ ಮಧುರವಾದ ಧ್ವನಿ, ಜೋಗುಳಲಲ್ಲೆಗಳ ಹಾಡು, ಮಕ್ಕಳಿಗೆ ಹೇಳುವ ಬುದ್ಧಿಯ ಕಥೆ ಇವೆಲ್ಲ ವಾಙ್ಮಯ ತಪ ಆ ತಪಸ್ವಿನಿಯು "ನೀರೊಳು ಮೈಯ್ಯ, ನೇಮದೊಳು ಕರಣಗಳ, ಭೂರಿ ಸತ್ವದೊಳು ಬುದ್ಧಿಯನು, ನಾರಾಯಣನಾಳುತನದೊಳಾತ್ಮನ ತೊಳೆ" ಯುವಳು; ತೊಳೆಯಬೇಕು. ಇದೇನು ಸಾಮಾನ್ಯ ಮಾತೇ? ಹೆಣ್ಣು ತಾಯಿಯಾಗಿ "ಶುಚಿ ರುಚಿಯುಪ್ಪಂತೆ" ಅನ್ನವನ್ನು ರಚಿಸಿ ಮನೆಯವರಿಗೂ, ಅತಿಥಿಗಳಿಗೂ, ಆಳು ಕೊತ್ತಿಗಳಿಗೂ, ಸಾಕಿದ ಪಶುಪ್ರಾಣಿಗಳಿಗೂ ಉಣಬಡಿಸುವ ಆ

ದೃಶ್ಯವನ್ನು ಪುರುಷನು ಕಣ್ಣಿಂದ ನೋಡಬಾರದು; ಕಣ್ಣೊಳಗಿಂದ ನೋಡ ಬೇಕು; ಅಂದರೆ ಆಕೆ ಜಗದೀಶ್ವರಿಯ ಪ್ರತಿನಿಧಿಯೆನ್ನುವ ಮಾತು ಮನ ವರಿಕೆ ಆಗುತ್ತದೆ; ಮಾನವರೂಪದಲ್ಲಿಳಿದ ಜಗಜ್ಜನನಿಯೆಂಬುದು ತಿಳಿದು ಬರುತ್ತದೆ.

ಹೆಣ್ಣೆಂದರೆ ನಿರಂತರವೂ ಪುರುಷನಿಗೆ ಅಧೀನವಾಗಿಯೇ ವರ್ತಿಸ ಬೇಕೇ? ಬಾಲ್ಯದಲ್ಲಿ ತಂದೆಗೂ ಪ್ರಾಯದಲ್ಲಿ ಗಂಡನಿಗೂ, ಮುಪ್ಪಿನಲ್ಲಿ ಮಗನಿಗೂ ಅಧೀನವಾಗಿರಬೇಕೆಂದು ಶಾಸ್ತ್ರಗಳು ಹೇಳುತ್ತವೆ. ನಿಜವೇ. ಅದರ ಕೂಡ ಇನ್ನೊಂದು ಮಾತನ್ನು ಗಂಡಸು ನೆನಪಿನಲ್ಲಿಡಬೇಕು. ಏನಂದರೆ—ಬಾಲ್ಯದಲ್ಲಿ ತಾಯ ಪ್ರೀತಿಗೂ, ಪ್ರಾಯದಲ್ಲಿ ಹೆಂಡತಿಯ ಒಲುಮೆಗೂ, ಮುಪ್ಪಿನಲ್ಲಿ ಸೊಸೆಯ ನಚ್ಚಿಗೂ ಪುರುಷನು ಪಾತ್ರನಾಗಿರ ತಕ್ಕದ್ದು. ಪುರುಷರಕ್ಷಣೆಯನ್ನು ಪಡೆದ ಪತಿವ್ರತೆಯು, ತನ್ನೊಳಗೇ ಒಂದು ಯೋಗವನ್ನು ಸಾಧಿಸಬೇಕಾಗುತ್ತದೆ; ಅದು ಉನ್ನತಿಗೆ ಸಹಾಯಕಾರಿ. "ತನ್ನೊಡಲಿಗೆ ತನ್ನ ಮನವ ಕಾಪಿಡುವುದು; ತನ್ನ ಮನಕೆ ತನ್ನ ಮತಿ ಯನ್ನೂ; ತನ್ನ ಮತಿಗೆ ತನ್ನ ಸಾತ್ವಿಕ ಧೈರ್ಯವನ್ನೂ" ಕಾಪಿಡಬೇಕಂತೆ. ಇದೇ ಮಾತನ್ನೇ ಇಂದು ಮಹಾತ್ಮಾ ಗಾಂಧಿ ಅವರು ಹೊಸ ಶಬ್ದಗಳಲ್ಲಿ ಆತ್ಮರಕ್ಷಣೆಯ ಮಂತ್ರವನ್ನು ಮಹಿಳೆಯರಿಗೆ ಉಪದೇಶಿಸುತ್ತಾರಲ್ಲವೇ?

ಇಂದು ನಾನು ಸತಿಯರಿಗೆ ಅದರಲ್ಲಿಯೂ ಕನ್ನಡ ಸತಿಯರಿಗೆ ಗಟ್ಟಿ ಯಾಗಿ ಹೇಳುವ ಮಾತೆಂದರೆ ಶುಚಿ! ಶುಚಿಯೊಂದರಿಂದಲೇ ಮಾನವನು ಪ್ರಗತಿಯ ಮೆಟ್ಟಲುಗಳನ್ನು ಸುಲಭವಾಗಿ ಏರಬಲ್ಲನು. ವಚನಕಾರರು ಇದೇ ಮಾತನ್ನು ಹಲವು ವಿಧವಾಗಿ ಹೇಳಲೊಲ್ಲರೇಕೆ; ನಾನು ನನ್ನ ಮಾತಿ ನಲ್ಲಿಯೇ ಹೇಳುವೆನು—"ಶುಚಿಯಾಗಿರೆ ದೇವತೆಗಳು ಸಲಹುವರು; ಶುಚಿ ಯನು ಪಿತೃಗಳು ಓವುವರು; ಶುಚಿಗಳಿಗಂಜುವವು ಪ್ರೇತ ಭೂತಗಳು; ಆದರಿಂದ ಶುಚಿಯುಪ್ಪುದು--ಎಲ್ಲ ವೇಳೆಯೊಳು."

ಪೌರುಷಕ್ಕೆ ಅಧಿಕಾರಿಯೆನಿಸಿದ ಪುರುಷನ ತಾಯಿ ಸ್ತ್ರೀ; ಅವನ ಮೈಯೊಳಗಿನ ನೆತ್ತರು ತಾಯಿಯದು; ಮಾತು ಕಲಿಸಿದಾಕೆ, ಹಾಡು ಕೇಳಿಸಿದಾಕೆ ತಾಯಿ; ಎಂಜಲಿನ ಮುದ್ದು, ಬಾಯ ಗುಟಿ ತಾಯಿಯದು. ಮನುಜ ಕುನ್ನಿಗೆ ಬೆಚ್ಚನೆಯ ಮನೆಯೆಂದರೆ ತಾಯ ಮಡಿಲು; ಭಯ

ನಿವಾರಣೆಗೆ ಕವಚವು ತಾಯ ಮುಂಜೆರಗು; ಅವನ ಗ್ರಹಬಾಧೆಗಳಿಗೆ ತಾಯ ಪಥ್ಯ. ಅಂದಮೇಲೆ ಆತನಿಗೆ ಪೌರುಷಾಧಿಕಾರವು ಎಲ್ಲಿಂದ ಬಂತು? ಕನ್ನಡಿಗರೇ, ಕನ್ನಡ ವಿರಾಟಪುರುಷನ ಅರ್ಧ ಶರೀರವು ಸ್ತ್ರೀಯದಿದ್ದು, ಅದಕ್ಕೆ ವಿದ್ಯೆಯ ನೆರಳಿಲ್ಲ; ಬುದ್ಧಿಯ ಬೆಳಕಿಲ್ಲ; ಸಂಸ್ಕೃತಿಯ ಸಂಸ್ಕಾರವಿಲ್ಲ; ಶಕ್ತಿಯ ಸೋಂಕಿಲ್ಲ. ಹೀಗಿದ್ದರೂ ಅವೆಲ್ಲ ಸ್ತ್ರೀವರ್ಗದಲ್ಲಿಯೇ ಬೀಜರೂಪ ದಲ್ಲಿವೆ. ಅವನ್ನು ಮೊಳೆಯಿಸುವುದು ಮುಂದುವರಿಯುವ ಕನ್ನಡ ಜನಾಂ ಗದ ಆದ್ಯ ಕರ್ತವ್ಯ. ವಿದ್ಯಾವಿಹೀನೆಯಿಂದ ವಿದ್ಯಾವಂತರನ್ನೂ, ಬುದ್ಧಿ ದುರ್ಬಲಳಿಂದ ಬುದ್ಧಿವಂತರನ್ನೂ, ಸಂಸ್ಕೃತಿಯನ್ನರಿಯದವಳಿಂದ ಸುಸಂಸ್ಕೃತ ರನ್ನೂ, ಶಕ್ತಿಹೀನಳಿಂದ ಶೂರರನ್ನೂ ಹಾರಯಿಸುವುದು ವಾಸ್ತವಿಕವೇ? ನೀವೇ ಹೇಳಿರಿ.

ರಾಜಪ್ರಭುತ್ವದ ಕಾಲದಲ್ಲಿ ನಾನು ರಾಜನ ತೊತ್ತು; ಆತನ ಊಳಿಗವೇ ನನ್ನ ಸರ್ವಾರ್ಥಸಾಧನ ಆಗಿತ್ತು. ಇಂದು ಪ್ರಜಾಪ್ರಭುತ್ವದ ಕಾಲ; ನಾನು ಕನ್ನಡ ಪ್ರಜರ ಸೇವಕಿ; ಅವರ ಮಂಗಲವೇ ನನ್ನ ಮಾಂಗಲ್ಯ. ಕನ್ನಡ ಜನತಾಜನಾರ್ದನನು ಕೃಪೆಮಾಡಿದರೆ, ನನ್ನಂಥ ಕರ್ಬೊನ್ನು ಚೆಂಬೊನ್ನಾಗುವುದೇನು ಅರಿದೇ? ನಿಮ್ಮೊಲವರಿತಿರ್ಪುದೇ ಎನಗೆ ಬಿಜ್ಜೆ; ನಿಮ್ಮೂಳಿಗವೇ ಎನ್ನ ಧರ್ಮ; ನಿಮ್ಮಾಣತಿಗೈವುದೇ ಎನ್ನ ಮನೋರಥ; ಆದ್ದರಿಂದ ನನ್ನ ಭಾಗ್ಯಕ್ಕೆ ಎಣೆಯುಂಟೇ?

ತಮ್ಮೆಲ್ಲರ ಮುಂದೆ ನಾನು ನಿವೇದಿಸಿದ್ದು ತುಸು ಹೆಚ್ಚಾಯಿತು; ಮನ್ನಿಸಬೇಕು. ಇದನ್ನು "ವಿನಯಿಪೆನಲ್ಲದೆ ನೇಮಿಪಳಲ್ಲ." ಕನ್ನಡ ನಾಡಿನ ಬಗೆಗಿರುವ ನನ್ನ ಕಳವಳವೇ ಇಷ್ಟು ಮಾತು ಬೆಳೆಯಲು ಕಾರಣ ವಾಯಿತು. ಅಂದಿನಂತೆ ಇಂದು ಸಹ ನಾನು ಕನ್ನಡನಾಡಿನ ಅದೇ ಮಂಗಲವನ್ನು ಕೋರುತ್ತಿದ್ದೇನೆ.—

"ಕನ್ನಡನಾಡೊಳು ಕಲಿಯುಗ ಪುಗದಿರ್ಕೆ ಕನ್ನಡಿಗರು ಘನರಕ್ಕೆ."

ಇಂತು—ಕನ್ನಡ ನಾರಾಯಣನ ಊಳಿಗದೊತ್ತು,

ಹೊನ್ನಮ್ಮ

---

೧೨

# ರತ್ನಾಕರನ ಯೋಗಭೋಗ

ಕನ್ನಡನಾಡಿನ ನಿರಂಜನಸಿದ್ಧಸ್ವರೂಪರಾದ ಕನ್ನಡಿಗರೇ,

"ಭರತೇಶ ವೈಭವ" ದಲ್ಲಿ ನೀವು ಓದಿದ್ದನ್ನೇ ಕಿರಿದರಲ್ಲಿ ಬರೆದಿರುವ ಪತ್ರವಿದು ಒಂಬತ್ತು ಸಾವಿರ ಪದ್ಯಗಳನ್ನೋದಲು ಬೇಸರಪಟ್ಟವರೂ ಉಂಟು; ಅಷ್ಟು ಸಾಕಾಗದೆ ಇನ್ನಿಷ್ಟಿದ್ದರೆ ಚೆನ್ನಾಗಿತ್ತು ಎನ್ನುವವರೂ ಉಂಟು. ಇದು ಪದ್ಯಗಳಲ್ಲಿ ಕೆಲವನ್ನು ಬಿಟ್ಟುಕೊಟ್ಟು ನಿಮಗೆ ಹಾಳತ ವಾಗುವಂತೆ "ಸಂಗ್ರಹ" ಮಾಡಿಕೊಳ್ಳುವುದು ನಿಮ್ಮ ಕೈಯೊಳಗಿದೆ; ಅದರಂತೆ ಇನ್ನಿಷ್ಟು ಪದ್ಯಗಳನ್ನು ಸೇರಿಸುವುದು ಕೈಯಲ್ಲಿಲ್ಲದಿದ್ದರೂ ಬಾಯ ಲ್ಲಿದೆಯೆಂದು ತಿಳಿಯಬೇಡಿರಿ ಯಾಕಂದರೆ ನಾನು ಧ್ಯಾನಕ್ಕೆ ಬೇಸ ರಾದಾಗ-ನನ್ನಾತ್ಮಲೀಲಾನುವೃದ್ಧಿಗಾಗಿ ಬರೆದವನು; ಅಧ್ಯಾತ್ಮವೇ ನಿಚಿತ ಪ್ರಯೋಜನವೆಂದು ನಾನು ಡಂಗುರ ಸಾರಿದ್ದೇನೆ. ಹಾಗಿದ್ದರೂ ನಾನು ಶೃಂಗಾರವನ್ನು ವಿಪುಲವಾಗಿ ಬಳಸಿರುವೆನು. "ಶೃಂಗಾರಕಾಗಿ ಕಷ್ಟದ ಕಥೆಗೇಳ್ದು ಜನಂಗಳು ಕೆಡಬೇಡವೆಂದು ಅಂಗಸುಖಿಯು ಮೋಕ್ಷಸುಖಿಯು ಕಾವ್ಯವನ್ನಿಷ್ಟು ಶೃಂಗಾರಕಟ್ಟಿ ಪೇಳಿದೆನು." ನನ್ನ ಮಟ್ಟಿಗೆ ಶೃಂಗಾರವೂ ಅಧ್ಯಾತ್ಮವೂ ಒಂದಕ್ಕೊಂದು ಹಿನ್ನೆಲೆಯಂತಿವೆ. ಒಂದರಿಂದೊಂದು ಶೋಭಿಸುತ್ತವೆ. "ಯೋಗವಾಗಲಿ ಭೋಗವಾಗಲಿ ನಿನ್ನ ಸಂಯೋಗ ವಾದರೆ ತಾನೆ ಮುಕ್ತಿ"ಯಾದ ಕಾರಣ "ಮಹಾಭೋಗಿ ಚಿದಂಬರ ಪುರುಷ! ನನ್ನೆದೆಯೊಳಿರಿಂ"ದು ಬಿನ್ನವಿಸಿಕೊಂಡಿದ್ದೇನೆ ಚಿದಂಬರ ಪುರುಷನೇ ಮಹಾ ಭೋಗಿಯಿರುವಾಗ ಅವನ ಅಣುಗರು ಭೋಗಿಗಳಾಗಿರು ವುದು ಬೇಡವೇ? ಯೋಗಯುಕ್ತ ಭೋಗವೇ ನಿಜವಾಗಿ ಸುಖಕಾರಕ ವಾಗಿದೆ. ಭರತೇಶನ ವೈಭವವು ಆದರ್ಶಭೋಗವೆಂದು ನಾನು ಗ್ರಹಿಸಿರು ವೆನು. ಆ ಭರತೇಶನನ್ನು ಕಣ್ಣಾರೆ ಕಂಡ ಮಾತ್ರಕ್ಕೆ ಅವನು ಸಂಪೂರ್ಣ ವಾಗಿ ಕಾಣಿಸಲಾರನು. ಯಾಕಂದರೆ ಅವನ ರೂಪವು "ನೇತ್ರಕೆ ಮನಕೆ

ಗೋಚರವಲ್ಲವದು; ವಾಕುಮಾತ್ರಕೆ ಗೋಚರವ್ಯೆಸೆ." ಹೀಗೆಂದರೂ ಆ ದೇಹಕಾಂತಿಯೇ ಬೇರೆ. "ಆ ಲಲಿತಾಂಗನ ತನುಕಾಂತಿ ಪೊದೆದ ದುಕೂಲದ ಹೊರಗೆ ರಂಜಿ"ಸುವಂಥದು. "ಹೆಂಗಳ ರೂಪು ಗಂಡರಿಗೆ, ಗಂಡರ ರೂಪು ಹೆಂಗಳ ಸೋಲಿಪುದು" ವಾಸ್ತವಿಕವಾದರೆ ಭರತೇಶನ "ಚೆಲ್ವಿಕೆ ಗಂಡು ಪೆಣ್ಗಳ ಕಂಗಳ ಸೆರೆವಿಡಿದಿಹುದು." ಇದೂ ಅಷ್ಟೊಂದು ದೊಡ್ಡ ಮಾತಲ್ಲ. "ನಿಟ್ಟಿಸಿದರೆ ಮುತ್ತ ಮುದಕಿಗಾದರು ಜುಮ್ಮು ಘಟ್ಟಿಸುಳಿಹುದು ಅವನ ರೂಪು!!" "ಬಿಂಗದ ಕುಪ್ಪಿಗೆಗಿಳಿವ ಕುಂಕುಮದ ನಿರಂಗದಿ ತಾಂಬೂಲ ರಸವಾ! ನುಂಗುವಾಗಿದಿರಿಗೆ ತೋರುವುದರಸನ ನುಂಗೊರಳೇನ ಬಣ್ಣಿ ಪೆನು?" ಅವನು ದಿಗ್ವಿಜಯಕ್ಕೆ ಹೊರಟಾಗ ಅವನನ್ನು ಕಾಣಬೇಕೆಂದು— "ನರೆಬಂದ ಮುದುಕಿಯು ಕರೆಬಾಯಿ ತೆರೆದುಕೊಂಡಿರದಲ್ಲಿ ಗೋಡೆಯು ನೆಮ್ಮಿ" ನಿಂತು ಭ್ರಮಿಸುತ್ತಿದ್ದರು. "ಪುರದ ಜನಂಗಳು ರಾಜಮನ್ಮಥನ ಶೃಂಗಾರಕೆ ಎದೆಸೋಲು"ತ್ತಿದ್ದರೆಂದರೆ ಆಶ್ಚರ್ಯವೇ? ಈ ಚೆಲುವಿಕೆ ಯಾಗಲಿ, ಮೋಹಕತೆಯಾಗಲಿ ಅವನಲ್ಲಿ ಎಲ್ಲಿಂದ ಬಂತು? "ಆವ ನೋಂಪಿಯ ನೋಂತನೋ? ಪೂರ್ವಭವದಲ್ಲಿ ಅದಾವ ಭಕ್ತಿಯಲ್ಲಿ ಆದಿ ಜಿನನನ್ನು ಭಾವಿಸಿದನೋ? ಅಲ್ಲದಿದ್ದರೆ ಆ ನೃಪಗಂತು ಲಾವಣ್ಯವಹುದೇ?" ಹೀಗೆ ಹಲವು ಭಾವಿಸಿದರೆ ಯಾವ ಪ್ರಯೋಜನವೂ ಆಗದು. "ದೇಹ ಬೇರೆ ಆತ್ಮ ಬೇರೆ" ಎಂಬ ಆತ್ಮಕಲೆಯನ್ನು ಧ್ಯಾನಿಸಿದ್ದರ ಫಲವಾಗಿಯೇ ಆತನಿಗೆ ಇಷ್ಟೆಲ್ಲ ಐಶ್ವರ್ಯಗಳು ಪ್ರಾಪ್ತಿಸಿವೆ. ಮೇಲೆ ರಾಜನಂತೆ ತೋರಿ ದರೂ ಒಳಗೆ ರಾಜಯೋಗಿಯಾಗಿದ್ದನು. "ನಿನ್ನೆನ್ನ ಸಂಧಾನವೇ ನಿತ್ಯಸುಖೈಕ" ವೆಂದು ತನ್ನಿಷ್ಟದೈವತದ ಮುಂದೆ ಒಪ್ಪಿಕೊಂಡಿದ್ದನು; "ನಿಮ್ಮರ್ಚನಾ ಸಂಭ್ರಮಂ ಚ್ಯುತಮಾಗಲ್ ಸಿರಿಕುಂದಿವರ್ಪುದರಿದೇ?" ಎಂಬುದು ಆತನಿಗೆ ಸ್ಪಷ್ಟವಾಗಿ ತಿಳಿದಿತ್ತು. ಭೃತ್ಯನು ತನ್ನನ್ನು ಸೇವಿಸುವಂತೆ ತಾನು ಈಶ್ವರ ನನ್ನು ಸ್ತೋತ್ರಸೇವೆಗಳಿಂದ ಒಲಿಸಿಕೊಂಡಿದ್ದರೆ ಪ್ರತ್ಯರ್ಥಿ ಕ್ಷಿತಿಪಾಲರೇನೆರ ಗರೇ?" ಎಂಬ ರಹಸ್ಯವು ಆತನ ಅಂಗೈನೆಲ್ಲಿಯಾಗಿತ್ತು. "ನಿಮ್ಮತ್ತಣ ಭಕ್ತಿಯೊಂದು ನಿಜಸಿದ್ಧಿಯಲಾ!" "ಈ ನಾನಾವಿಧಿಯೆಲ್ಲವೂ ಕನಸು." "ಬರುತುಂ ಬಯಲಾಗುತುಂ ಇರ್ಪವ್ಯೆಸೆ." ಆದಕಾರಣ, "ನೀನಾರೆಂಬ ರಿವಾಗೆ ಸಾಕು" ಎಂದು "ದೇಹ ಬೇರೆ ಆತ್ಮ ಬೇರೆ" ಎಂಬ ಆತ್ಮಕಲೆ

ನೊಂದನ್ನೇ ಸಾಧಿಸಿದವನು ಭರತೇಶನು ಭರತೇಶನ ನಿರಂತರ ಪ್ರಾಯವೂ, ಚಿರ ಸೌಂದರ್ಯವೂ, ಭೋಗಸಾಮರ್ಥ್ಯವೂ, ಐಶ್ವರ್ಯಪ್ರಾಪ್ತಿಯೂ ಯಾರಿಗೆ ಬೇಡ? ಬೇಡುವವರೆಲ್ಲ ಪಡೆಯುವ ಉದ್ದಿಮೆಯನ್ನು ಮಾಡಲಿಕ್ಕೆ ಒಲ್ಲರು

ಯೋಗವೆಂದರೆ ಮೂಗು ಮುರಿಯುವರು; ಭೋಗವೆಂದರೆ ಮೂಗು ಹಿಗ್ಗಿಸುವರು. "ತಮ್ಮ ಶರೀರ ತುಂಬಿರುತಿಹ ಹಂಸತತ್ವವನ್ನು ಆರು ಬಲ್ಲರು?" ತಿಳಿಯಲಿಕ್ಕೂ ಒಲ್ಲರು ಹಸಿವೆಯಾಗಿದೆ—ಉಣ್ಣಲಿಕ್ಕೆ ಒಲ್ಲೆನ್ನುವಂತೆ. ನಿರಂತರ ಪ್ರಾಯದ ನೆಲೆಯೂ, ಚಿರಸೌಂದರ್ಯದ ಸೀಮೆಯೂ, ಭೋಗಸಾಮರ್ಥ್ಯದಕಣವೂ, ಅತುಲೈಶ್ವರ್ಯದ ಬೊಕ್ಕಸವೂ ಆದ ಹಂಸ ತತ್ವವು ಮಹಾನಿಧಿಯಾಗಿ ತನ್ನಲ್ಲೇ ಇದ್ದರೂ, ಅನ್ನಿಗರನ್ನು ಯಾಚಿಸುವಂತೆ ಕನ್ನಡಿಗರ ಸ್ಥಿತಿಯಾಗಿದೆ. ಯೋಗವು ಕೈಲಾಗದ ಜೋಗಿಗಳ ಕೆಲಸವೆನ್ನುವ ಪುರುಷಾರ್ಥ ಸಾಧಕರು ಭೋಗದ ಸಿದ್ಧತೆಯನ್ನಾದರೂ ಏನು ಮಾಡಿಕೊಂಡಿದ್ದಾರೆ? ಆ ಸಿದ್ಧತೆಯಿಲ್ಲದಿದ್ದರೆ ಭೋಗದಲ್ಲೇನಿದೆ ಸುಖ? ಭೋಗದ ಸಿದ್ಧತೆಯ ಬೇರು ಸಹ ಯೋಗದ ತಳದಲ್ಲಿಯೇ ಅದೆ.

ಭರತೇಶನಿಗೆ ತೊಂಬತ್ತಾರು ಸಾವಿರ ಸತಿಯರ ಸಂಸಾರ; ರಾಜ್ಯಭಾರ ಇದ್ದವು. ಆದರೂ ಅವನ ಅಂತಃಸ್ಥಿತಿಯು ಹೇಗಿದ್ದಿತೆಂದರೆ—"ರಾಜೀವಂ ಕೆಸರಲ್ಲಿಯುಳ್ದದವೋಲ್ ಊರ್ಧ್ವಕ್ಕೆ ಕಣ್ಣಿಟ್ಟಿತ್ತು." "ಗಾನ ಮದ್ದಳೆ ತಾಳ ಲಯಕೆ ನರ್ತಿಪ ಮಂಡಯಾನೆಗೆ ಶಿರದ ಕುಂಭದೊಳು ಧ್ಯಾನವಿಪ್ಪಂತೆ" ಸಂಸಾರದಲ್ಲಿದ್ದರೂ ಮುಕ್ತಿಸಂಧಾನದಲ್ಲಿ ಅವನ ನೆನಹು ರಮಿಸುತ್ತಿತ್ತು. ಅವನಿಗೆ ಹೊರಗಿನ ದೇಗುಲವಷ್ಟೇ ಕಾಣಿಸುತ್ತಿದ್ದಿಲ್ಲ; ಒಳಗಿನ ದೇವನೂ ಕಾಣಿಸುತ್ತಿದ್ದನು "ಉದರಪೋಷಣಕಾಗಿ ಬಹುಜನ್ಮ ಸಂದವು ವಿದಿತಾತ್ಮ ಪೋಷಣಕಾಗಿ"ಯೂ ಅವನು ಸಾಹಸಪಡುತ್ತಿದ್ದನು. ಅವನು ಜಿನೇಶ್ವರನನ್ನು ಗದ್ದುಗೆಯ ಮೇಲಿಟ್ಟು ಪೂಜಿಸದೆ ಮನದೊಳಗಿಟ್ಟು ಪೂಜಿಸುತ್ತಿದ್ದುದರಿಂದ ಅವನಿಗೆಜ ನನಾಥನೊಲಿದನಲ್ಲದೆ ಸ್ತ್ರೀವಶ್ಯ ನೃಪವಶ್ಯ ಜನವಶ್ಯ ಸಹಜದ ಮಾತುಗಳಾದವು. "ಕಲಿತು ಮರೆತ ಪದ್ಯವನ್ನು ತನ್ನೊಳಗೆ ತಾನೇ ಆಲೋಚಿಸಿ ನೆನಪು ಮಾಡಿಕೊಳ್ಳುವಂತೆ, ತಿಳಿವು ಬೆಳಗು ನನ್ನ

ರೂಪೆಂದು ನೆನಹು ಮೈಯೊಳಗಾಡಲು ಆತ್ಮನು ತೋರುವನು." ಅದನ್ನು ಕಂಡವನೇ ಉಂಡವನು ತೇಗುವಂತೆ, ಹೇಳಲು ಸಮರ್ಥನಾಗುವನು." ಈ ಸೂತ್ರಮಂತ್ರಗಳು ಭೋಗಿಗೆ—ಸಂಸಾರಿಗೆ ಸಹಾಯಕವಾಗಲಾರವೇ?

ಉತ್ತಮ ಸುಖವು ಬೇಕೇ? ಅದಕ್ಕಾಗಿ "ಹೊತ್ತನರಿಯಬೇಕು, ಹೊಲಬನರಿಯಬೇಕು; ಚಿತ್ತದ ನೆಲೆಗಾಣಬೇಕು; ಹೊತ್ತುಹೊತ್ತಿಗೆ ಹೊಸ ಪರಿಯ ಸಿಂಗರ ಬೇಕು." ಇಷ್ಟಾದರೆ ಸಾಲದು. "ಯೋಚನೆ ಬೇಕು, ಗಂಭೀರ ಬೇಕು; ಉಗ್ರತ್ವ ಮೋಚನೆ ಬೇಕು; ಓಜೆ ಬೇಕು, ಆಚಾರಶೀಲ ಬೇಕು;" ಈ ಭೋಗಮಾರ್ಗವೆಂದರೆ ರಾಜಮಾರ್ಗವೇನೂ ಅಲ್ಲ. "ಒಗೆದ ಕಾತರ ತಗ್ಗುವನಿತು ಭೋಗಿಸಲದು ಸೊಗಸು; ವೆಗ್ಗಳಿಸಿ ಭೋಗಿಸಲು ಧಗೆಯಹುದು; ಆಸರಹುದು; ಆದರಿಂದ ಮತಿಗೆಡುವದು; ಆ ಸುಖವೇ ತನಗೆ ಹಗೆಯಹುದು" ನೆನಪಿರಲಿ—"ಕೂಟವೆಂಬುದು ಸ್ವಲ್ಪಕಾಲ ನಾಟಿದರದು ಸುಖ; ವೆಗ್ಗಳಿಸಿದರೆ ಎದೆಗೋಟಲೆ." ಭೋಗದಿಂದ ಉತ್ಸಾಹ ವಿಮ್ಮಡಿಸಿ, ಬುದ್ಧಿ ತಿಳಿಯಬೇಡವೇ? ಅದಕ್ಕೇನು ಉಪಾಯವೆಂದರೆ - "ಒಳಗರಿದು ಒಲವರಿದು ಅಂತರಂಗದ ಶಕ್ತಿಯಲುಗಿ ಕೂಡುವ ಕುಶಲರಿಗೆ ಗೆಲುವಹುದು; ಆನಂದವಹುದು; ಅರಿವಹುದು; ಮುಖಕಾಂತಿ ಪಜ್ಜಳಿಸುತಿಹುದು." ಯಾಕೆಂದರೆ ಕಾಮವೊಂದು ಜಾಡ್ಯ; ಜಾಡ್ಯವು ತೊಲಗಬೇಕಾದರೆ ಎರಡು ಉಪಾಯ. ಉಪವಾಸ ಒಂದು, ಔಷಧಿ ಇನ್ನೊಂದು. ಉಪವಾಸವು ಆಯಾಸಕರವೆನಿಸುವವರಿಗೆ ಔಷಧಿಯೇ ಹಾದಿ. "ಪಿತ್ತವೇರಿದರೆ ಶರೀರಶೋಧನೆಗೈಯುವಂತೆ ಒತ್ತಿದ ಮದವ ಪೆಂಗಳೊಳಾಡಿ ಕಳೆಯುವ" ಉಪಾಯವು ಆತ್ಮನೊಳಗೆ ಇರಬೇಕಾದವರಿಗೆ ಶೋಭಿಸುವಂಥದು. ಹಾಗೆ ಮಾಡಿ ಪನ್ನೀರಾದಿಗಳಿಂದ ತಣಿಯುವದರಿಂದ ಮುನ್ನಿನ ಕಾಂತಿಯು ನೂರ್ಮಡಿಸುವದು.

ಒಂದೊಂದು ದಿವಸ ಕಾಯೋತ್ಸರ್ಗದಲ್ಲಿ ನಿಲ್ಲುವುದೂ ಒಂದೊಂದು ದಿವಸ ಯೋಗದಲ್ಲಿ ತೊಡಗುವುದೂ ನನ್ನ ಯೋಗ-ಭೋಗದ ಪರಿಪಾಠ; ಗಾಳಿಪಟವನ್ನು ಆಡುವವರೆಗೆ ಆಡಿ, ಆಟ ಸಾಕಾಗಲು ಸುರುಳಿ ಸುತ್ತಿ ತೆಗೆದಿಡುವಂತೆ ಅವನ ಸಂಸಾರದ ಆಟ. "ಸಂದು ಭೋಗದೊಳಿದ್ದು

ಯೋಗಕೆ ಸಲುವಾಗ ಹಿಂದಣ ವಾಸನೆಯಿಲ್ಲ." ಅವನು ರಾಗರಸಿಕನಾಗಿರುವಂತೆ, ವೀತರಾಗರಸಿಕನೂ ಆಗಿರುವನು; ಶೃಂಗಾರಕೋವಿದನಾಗಿರುವಂತೆ ಆತ್ಮಸುಸಂಘ ಸಮ್ಮುಖನೂ ಆಗಿರುವನು; ಅವನು ಸಂಗರಸಮ್ಮುಖನಾಗಿರುವನಲ್ಲದೆ ಯೋಗಾಂಗಕೋವಿದನೂ ಆಗಿರುವನು. ಬಡವನಂತಿರಲಿಕ್ಕೂ ಪ್ರಭುವಿನಂತಿರಲಿಕ್ಕೂ ಅವನಿಗೆ ಬರುತ್ತಿರುವದರಿಂದ ಅವನು ವೀರಧರ್ಮಿಯೆನಿಸುತ್ತಾನೆ. ಚೆಲೆವೆಣ್ಣುಗಳು ಕಣ್ಣು ತಿರುಗಿಸುತ್ತ ಮೈ ಕಂಪಿಸುತ್ತ, ಪಾದವ ಮುಟ್ಟಿಯಾದರೂ ಕಿರಿದು ಸುಖ ಕಾಣಬಹುದೆಂದು ಪಾದಗಳನ್ನು ಹಿಡಿದರೆ, ಅಂಗನೆಯರ ಕೈ ಬೆಚ್ಚಗೂ, ಯೋಗಭೋಗಿಯ ಚರಣಗಳು ತಣ್ಣಗೂ ಇರಬಲ್ಲವಾದರೆ, ಅದೊಂದು ಪರೀಕ್ಷೆ. ಅವನು ಅಂಗಜಾಗಮಸಿದ್ಧನೆನಿಸುವನು; ಅವನು ಒಬ್ಬಳ ಕೆನ್ನೆ, ಇನ್ನೊಬ್ಬಳ ಮೊಲೆ, ಇವನ್ನು ಉಂಗುಟಗಳಿಂದೊತ್ತಿದರೆ ಅವರು ಕಾಮತೃಪ್ತಿ ಪಡೆಯುವರು. ಮುದುಕ ಮುದುಕಿಯರು ಒಮ್ಮೆ ಹೊಕ್ಕರೆ ಬೆಡೆಬೆದೆಗೊಳಿಸಿ ಕಾಡುವಂಥ ಮನೆಗಳು ಮದವೆದ್ದ ಜವ್ವನದರಸಗರಸಿಯರಿಗೆ ಎಂಥ ಸೊಕ್ಕು ಮಾಡುವುದು ಆಶ್ಚರ್ಯವೇ? ಅಂಥ ಮನೆಗಳಲ್ಲಿ ಅಂಗಜಾಗಮಸಿದ್ಧನು ಭೋಗಿಸಿ - ಸುಖನಿದ್ರೆ ತಳೆದು—ನಿದ್ರೆ ತಿಳಿದು ಎಚ್ಚತ್ತಾಗ ತಲೆಯಿಂದ ಪಾದದ ವರೆಗೂ ಹಂಸನಾಥನ ಪ್ರಭೆ ಸೂಸುತ್ತಿರುವದೆಂದು ಹೇಳಿದರೆ ಕಟ್ಟುಕಥೆ ಎನಿಸೀತು. ಗ್ರಹ ಹಿಡಿದಂತೆ ಹಿಡಿಯುವುದೂ, ಗರ್ದಭಗಳಂತೆ ಒದೆದಾಡುವುದೂ, ವಹಣಿಕಾರರಂತೆ ಕೆಲೆಯುವುದೂ, ಮಹಿಷನಂತೆ ನೋಡಿ ಕುದುರೆಯಂತೆ ಕೂಡುವುದೂ--- ವರ್ಣನವೇ ?

ಭೋಗಿಗಳಲ್ಲಿ ಅತಿಭೋಗಿಯಂತೆ ಕಾಣಿಸಿದರೂ ಯೋಗಭೋಗಿಯು ವ್ರತ ಹಿಡಿದರೆ ಸರ್ಪವನ್ನು ಹಿಡಿದಂತೆ ಕಡುದೃಢವಾಗಿ ಹಿಡಿಯುವನು ಹಿಡಿದ ಮೇಲೆ ಅಳಿಮನಸಾದರೆ ಅದೇ ವ್ರತವು ಹಾವು ಕಡಿದಂತೆ ಕಡಿಯುವ; ದೆಂದು ಅವನಿಗೆ ಗೊತ್ತು. ಪ್ರತಿಯನ್ನು ಹಣ್ಣು ಬಂದಪ್ಪಿಕೊಂಡರೂ ಬ್ರಹ್ಮಚರ್ಯವು ಝಮ್ಮುದಟ್ಟಬಾರದು; ಹೆಂಗಳ ಕಂಡು ಕುದಿದರೆ ಅದು ಬಿಟ್ಟಿಯ ಬ್ರಹ್ಮಚರ್ಯವೇ ಸರಿ. ಪುಣ್ಯಬಲದಿಂದ ಪಾಪವನ್ನೂ, ಸಚ್ಚರಿತ್ರದಿಂದ ಪುಣ್ಯವನ್ನೂ ಈಡಾಡಬೇಕಾಗುತ್ತದೆ. ಹೀಗೆ ಪಾಪಪುಣ್ಯಗಳನ್ನು ಆತ್ಮಯೋಗದಿಂದ ತೊಳೆದರೆ ಮುಕ್ತನಾದ ಚಿದ್ರೂಪನು ಒಪ್ಪುವನು,

ನಿರ್ಧಾರವನದಿಂದ ಒಮ್ಮೆ ಪಾಪದ ಚರಿತವನ್ನು ಬಿಟ್ಟು ಪುಣ್ಯದ ಸೊಮ್ಮಿನಲ್ಲಿ ನಿಲ್ಲಬೇಕು; ಅದರಲ್ಲಿ ನಿಂತು ತಮ್ಮಾತ್ಮರತಿಯನ್ನು ಸಾಧಿಸಬೇಕು; ಮತ್ತು ಅದನ್ನ ನೆಮ್ಮಿ ಪುಣ್ಯವನ್ನು ಬಿಡಬೇಕು.

ಈ ಪಾಪಪುಣ್ಯಗಳ ಜಂಜಡವನ್ನು ನೀಗುವುದು ಯಾತರ ಸಲುವಾಗಿ? ತನುಭೋಗದೊಳು ಅತಿ ಮಗ್ನರಾದರೆ ಪಾಪ ಜನಿಸುವುದು; ಅದರಿಂದ ನರಕಪ್ರಾಪ್ತಿಯಾಗುವದು. ಅದ್ದರಿಂದ ನರಜನ್ಮ ಪಡೆದಾಗ, ತಾಳುವಷ್ಟಾದರೂ ವ್ರತದೊಳಾಚರಿಸಬೇಕು, ಭೋಗಕ್ಕೆ ಮರುಳಾಗಬಾರದು. ಇಂಥ ಯೋಗಿಭೋಗಿಯು ಭೋಗವಕ್ಷಿದ್ದರೂ ವ್ಯಂತರಖೇಚರರನ್ನು ತಲೆವಾಗಿಸುವ ಪರಾಕ್ರಮಿಯಾಗಿರುವದರಿಂದ ಯೋಗಕ್ಕೆ ಮುಖವಿಕ್ಕಿದಾಗ ಮೂಲೋಕವನ್ನು ಕೂಗಾಡಿಸದಿರುವನೇ?

ಭಕ್ತಿಹೃದಯದ ಭಾರದಿಂದ ಬಾಗಿದ ಭೋಗಿಗೆ ಸಿರಿಗೇನು ಕಡಿಮೆ, ಸಿಂಗರಕೇನು ಕಡಿಮೆ? ಭೃತ್ಯರು ತಮ್ಮನ್ನು ಸೇವಿಸುವಂತೆ ರಾಜನಾದವನು ಕಾಣ್ಕೆ, ಕೈಮುಗಿತ, ಅಷ್ಟಾಂಗಾನತ, ಸ್ತುತಿ, ಸೇವೆ ಇವುಗಳನ್ನು ಪಾಲಿಸುತ್ತ ನಂಬಿಕೊಂಡಿದ್ದರೆ ವೈರಿಗಳಾದ ಅರಸರು ಸಹ ವಶವರ್ತಿಯಾಗುವರಷ್ಟೇ? ಆದರೆ ಪರಮಾತ್ಮನ ಅರ್ಚನಾಸಂಭ್ರಮವು ಚ್ಯುತಗೊಂಡರೆ ಸಿರಿ ಕುಂದಿ ಬರುವುದರಲ್ಲಿ ಆಶ್ಚರ್ಯವೇನು? ಅವನ ಅಂತರಂಗದಲ್ಲಿ ಹಂಸನಾಥನು ಸುಖದೋರುತ್ತ — ಬರೆದು ಬಚ್ಚಣಿಸಿದಂತೆ — ಬೆಳಗುದೋರುತ್ತ, ಸುಧೆಯ ಸೂಸುತ್ತ ನಿರಂತರವಾಗಿ ನೆಲೆಸಿ ನಿಲ್ಲುವನು. ಹಂಸನಾಥನು ಚೆಲುವರ ಚೆಲ್ವನಾದರೂ ಬಡವರ ಆಧಾರನು; ಚೆನ್ನಿಗರ ಚೆನ್ನನಾದರೂ ಬಲ್ಲಿದರ ಮನೋಹರನು; ಸವೀರರ ವೀರನಾದರೂ ಕಡುಚದುರರ ಮಚ್ಚುಕಾರನು. ಹಂಸನಾಥನನ್ನು ಅನುಭವಿಸಿದ ಜೀವಾತ್ಮನು—"ನೀವೆನ್ನೊಳ್ ನಿಲೆ ಸಾವುದುಂ ಸುಖವಲ್ತೆ" ಎಂದು ಗಟ್ಟಿಸಿ ಹೇಳುವುದರಲ್ಲಿ ಸಂಶಯವೇ ಇಲ್ಲ.

ನಾನಿಂದು ಘಂಟಾಘೋಷವಾಗಿ ಹೇಳುವದೇನಂದರೆ-ಶೃಂಗಾರಕಾಗಿ ಕಷ್ಟರ ಕಥೆ ಕೇಳಿ ಜನಂಗಳು ಕೆಡುವುದಿನ್ನು ಸಾಕು. ಅಂಗಸುಖಿಯ

ಹಾಗೂ ಮೋಕ್ಷಸುಖಿಯು ಕಾವ್ಯವಾದ ಭರತೇಶವೈಭವವನ್ನು ಶೃಂಗಾರ ಕಟ್ಟಿ ಹೇಳಿರುವುದನ್ನು ಕನ್ನಡಿಗರು ಓದಲಿ, ಮನನ ಮಾಡಲಿ, ಜೀವಿತದಲ್ಲಿ ಅರಗಿಸಿಕೊಳ್ಳಲಿ. ಸೊಗಸಾದ ಸುಂದರವಾದ ಜೀವನ ಬೇಕಿದ್ದರೆ, ಸುಖಮಯವಾದ–ಆನಂದಮಯವಾದ ಬಾಳು ಬೇಕಿದ್ದರೆ ಅಧ್ಯಾತ್ಮವೇ ನಿಚಿತ ಪ್ರಯೋಜನವೆಂಬುದನ್ನು ಮನಗಾಣಲಿ. "ಸಂಸಾರಿಗರಿಗೇಕೆ ಅಧ್ಯಾತ್ಮ? ಅದರ ದಾರಿಯೇ ಬೇರೆ. ಆ ವರ್ಗದ ಜನವೇ ಬೇರೆಯೆನ್ನುವವರು— ಅಧ್ಯಾತ್ಮಕ್ಕಾಗಿ ಬಾಯಿ ಬಿಡುವ ಅಂತಃಕರಣವು ಯಾರಿಗಿಲ್ಲ? ಅವರು ಕೈಯೆತ್ತಲಿ; ಪ್ರತಿ ಒಂದು ಅಂತಃಕರಣವು ಹಂಸನಿಟ್ಟ ತತ್ತಿ. ಇಡಿಯ ಜೀವಿತದಲ್ಲಿ ಅದಕ್ಕೆ ಕಾವು ಕೊಟ್ಟರೆ, ಅದು ಮರಿಯಾಗಿ ಹೊರಬಿದ್ದೀತು. ಆ ಕಾವು ಕೊಡುವ ಕ್ರಿಯೆಯೇ ಅಧ್ಯಾತ್ಮಸಾಧನೆ. ಒಲ್ಲೆಂದರೂ ಹುಟ್ಟು ಹುಳುವೆಲ್ಲ ಅಧ್ಯಾತ್ಮಮಾರ್ಗವನ್ನು ಅನುಸರಿಸಿಯೇ ಸಾಗಿವೆ ಅದಕ್ಕೆ ಸ್ವಾಭಾವಿಕವಾದ ಪ್ರಗತಿಯೆನ್ನಲಾಗುತ್ತದೆ. ಕ್ರಮಪ್ರಗತಿಯ ಮೇಲೆ ಕೈಯೂರಿದರೆ, ಅದನ್ನು ನಂಬಿ ಕಣ್ಣುಮುಚ್ಚಿದರೆ ದಾರಿ ದೂರವಾಗಿ, ಕಾಲ ವಿಪುಲವಾಗಿ ಶ್ರಮವತಿಶಯವಾಗಿ ಅಂಧನಂತೆ ಸಾಗಬೇಕಾಗುತ್ತದೆ. ಆದ್ದರಿಂದ ನೀನಾರೆಂಬ ಅರಿವು ಪಡೆದು ಸಾಗಿದರೆ ದಾರಿ ಕಿರಿಯದಾಗಿ, ಶ್ರಮ ಕಡಿಮೆಯಾಗಿ, ಕಾಲ ಸದ್ವ್ಯಯವಾಗಿ—ಬದುಕಿರುವ ಆಯುಷ್ಯವೂ ಸೊಗಸಾಗುತ್ತದೆ; ಆಟವಾಗುತ್ತದೆ ಅಂಥವನಿಗೆ ಸಿರಿಯೇನು, ದಾರಿದ್ರ್ಯವೇನು ? ಹಾಲಿನೂಟವೇನು — ಕದನ್ನದುಣಿಸೇನು? ಅಂಥವನಿಗೆ ರಾಜ್ಯವೂ ಅಷ್ಟೇ — ನಿರ್ಬಂಧವೂ ಅಷ್ಟೇ ಇವೆಲ್ಲ ಆಟಗಾರನ ಲಕ್ಷಣಗಳೇ ಆಗಿವೆ. ಇವನ್ನೆಲ್ಲ ಅವನು ಕನಸೆಂದೂ, ಸೋಗಿನಾಟವೆಂದೂ ಭಾವಿಸುವನು. "ನಿನ್ನೆನ್ನ ಸಂಧಾನವೆ ನಿತ್ಯ ಸುಖೈಕ"ವೆಂದು ಪರಮಾತ್ಮನ ಸಂಧಾನವನ್ನು ನೆಮ್ಮಿಕೊಂಡಿರುವನು. ಈ ಜೀವನರಹಸ್ಯವನ್ನೆಲ್ಲ ವಿವರವಾಗಿ, ಸೋದಾಹರಣವಾಗಿ, ವ್ಯಾವಹಾರ್ಯವಾಗಿ ತಿಳಿಯಬೇಕಾದರೆ ಭರತೇಶವೈಭವವನ್ನು ಪಠಿಸತಕ್ಕದ್ದು ಅನಿವಾರ್ಯವಾಗಿರುತ್ತದೆ. ಅಧ್ಯಾತ್ಮವಾಗಲಿ, ಯೋಗವಾಗಲಿ ಈ ಮಾತಿಗೆ ದೂರವೇ? ಅಂಥವರು "ತುಡುಕಿ ಚಂದುಟಿ ಕಚ್ಚುವಾಗ ಒಂದು ಕೋಟಿ ಪಾಲ್ಗಡಲನೀಂಟಿದ ಸವಿಯಹುದು. ಮೊಲೆಗಳ ಪಿಡಿವಾಗ ತ್ರಿಜಗದ ಸಿರಿ ಕೈಯೊಳಡಗಿದಂತಿಹುದು" ಅವನ

ಕಣ್ಣಿಗೆ ಕಲಶಕನ್ನಡಿಯಾಂತಿಹ ಸತಿಯು ಮುಕ್ತಿಸತಿಯಂತೆ ಕಂಗೊಳಿಸುವಳು.

ಇಂಥ ಯೋಗಸಾಮರ್ಥ್ಯವುಳ್ಳವರಿಗೆ ತನುಸಡಿಲದು; ಅಚ್ಚಜವ್ವನವು ತಪ್ಪದೆ ನೆಲೆಗೊಳ್ಳುವದು. ಅವನ ಪ್ರಾಯುವು ದಿನದಿನಕ್ಕೆ ಸ್ಫುರಿಸುತ್ತಲೇ ಇರುವದು. ತರುಣಿಯರೊಡನರ್ತಿ ಮಾಡುವುದೆಂದರೆ ತನುವಿಗಾವರಿಸಿದ ಮದವನ್ನು ಜಾರಿಸುವ ಕ್ರಿಯೆ; ಗುರು ಹಂಸನಾಥನನ್ನು ನೋಡುತ್ತ ಕರ್ಮನಿರ್ಜರೆ ಮಾಡುವ ಮಾಟ. "ರಾಜ್ಯಪಾಲನ ಸಂಧಿ"ಯಲ್ಲಿ ಬಂದ ಈ ವಿಷಯವನ್ನು ಒಂದೇ ಮಾತಿನಲ್ಲಿ ವಿವರಿಸಬೇಕಾದರೆ—"ಪವನಾಭ್ಯಾಸ ಯೋಗಾಭ್ಯಾಸ ಧ್ಯಾನಮಾರ್ಗವನರಿದಾಚರಿಪರಿಗೆ, ಭವಿತಗ್ಗದಂಗ ಜಗ್ಗದು; ರೋಗ ಹೊದ್ದದು; ನವಯೌವನವೆ ವಿರಾಜಿಪುದು." ಇಲ್ಲಿ, ಪವನಾಭ್ಯಾಸವಾಗಲಿ, ಯೋಗಾಭ್ಯಾಸವಾಗಲಿ ಅರಿದು ಆಚರಿಸಬೇಕೆನ್ನುವ ಮಾತನ್ನು ಅಲಕ್ಷಿಸಲಿಕ್ಕಾಗದು. ಹಾಗೆ ಅರಿತು ಆಚರಿಸುವವನ ಇರವು—ಬೆಳಗನೆ ಮಿಾವಂತೆ; ಬೆಳಗನೆ ಪಾಯ್ವಂತೆ; ಬೆಳಗಿನೋಕುಳಿಯಾಡುವಂತೆ; ಬೆಳಗಿನೋಳೋಲಾಡಿ ತೇಂಕಾಡುವಂತೆ—ಆ ಪರಮನು ತನ್ನೊಳಗೆ ತಾನಿರಬಲ್ಲನು.

ಸಾಕು ಕನ್ನಡಿಗರೇ, ಕನಸಿನ ಗಂಟೂ, ಕನ್ನಡಿಯ ಗಂಟೂ ಎರಡೂ ಒಂದೇ. ಅವೆರಡಕ್ಕಿಂತ ಕೈಯೊಳಗಿನ ಗಂಟೇ ಲೇಸೆಂದು ಗಾವಿಲನಿಗೂ ಗೊತ್ತು. ನಾನು ಇಷ್ಟು ಹೊತ್ತು ಕಂಠಶೋಷ ಮಾಡಿದ್ದು, ಒಂದು ದಂಟಿನಂತೆ ನಿಮಗೆ ಲಭಿಸಿದರೂ ಸಾರ್ಥಕವೆನಿಸುವದು.

ಇಂತು—ಕನ್ನಡನಾಡಿನ ನಿರಂಜನಸಿದ್ಧಸ್ವರೂಪರ,

ರತ್ನಾಕರ

೧೧

# ಸರ್ವಜ್ಞನ ಸಲಹೆ

ನನ್ನ ನಚ್ಚಿನ ಕನ್ನಡಿಗರೆ,

ನಾನು ಗತಿಸಿ ಅನೇಕ ಶತಮಾನಗಳಾದ ಮೇಲೆ ನಿಮಗೊಂದು ಓಲೆ ಬರೆಯುತ್ತಿದ್ದೇನೆ ನನ್ನ ಜೀವಮಾನದಲ್ಲಿ ಅವೆಷ್ಟೋ ತ್ರಿಪದಿಗಳನ್ನು ರಚಿಸಿ ಕನ್ನಡ ನಾಡಿನ ವಾತಾವರಣದಲ್ಲಿ ತೂರಿಬಿಟ್ಟಿದ್ದೇನೆ. ಅವು ವಾತಾವರಣದಿಂದ ಭೂಮಿಗಿಳಿದು ಹುಡಿಗೂಡುವ ಮೊದಲೇ ಅವನ್ನಾಯ್ದು ಒತ್ತಟ್ಟಿಗೆ ಸಂಗ್ರಹಿಸಿರುವದಕ್ಕೆ ತಮಗೆ ಧನ್ಯವಾದಗಳನ್ನು ಸಲ್ಲಿಸುತ್ತೇನೆ. "ವಾತಾವರಣದಲ್ಲಿಯ ತ್ರಿಪದಿಗಳೆಷ್ಟೋ ಉಸುರಿನ ಕೂಡ ಒಳಸೇರಿ, ಜೀವಕಳೆಯನ್ನು ತುಂಬಿವೆ; ಅವೆಷ್ಟೋ ಹೃದಯಗಳನ್ನು ತಣಿಸಿವೆ; ಬುದ್ಧಿಗಳನ್ನು ಉಣಿಸಿವೆ.'' ಯೆಂದು ಹೇಳುತ್ತಿರುವುದು ನಿಮ್ಮ ಔದಾರ್ಯದ ... ಇತ್ತೀಚೆಗೆ ಕನ್ನಡಿಗರಲ್ಲಿ ಉದಿಸಿವ ಸಹಾನುಭೂತಿಗೂ, ಸಹೃದಯತೆಗೂ ನಾನು ಮುಗ್ಧನಾಗಿರುವೆನು. ರಾಜಾಶ್ರಯವಿಲ್ಲದಿದ್ದ ಕವನಗಳೆಂದು ಕಡೆಗಣಿಸದೆ, ಲೋಕಾಶ್ರಯವನ್ನಿತ್ತು ತ್ರಿಪದಿಗಳನ್ನು ಎತ್ತಿಹಿಡಿಯುತ್ತಿರುವ ಕನ್ನಡಿಗರ ಗುಣಗ್ರಾಹಕತೆಯು ಶುಭ ಸೂಚಕವಾಗಿದೆ. ನನ್ನ ಸಮಕಾಲೀನ ಜನತೆಯು ಜೀವನಲತೆಯ ಹೂವೆಂದು ಭಾವಿಸಿ ನನ್ನನ್ನು 'ಜನಪದ ಸಾಹಿತ್ಯಾಚಾರ್ಯ ಪಟ್ಟಕ್ಕೇರಿಸಿದ್ದೀರಲ್ಲವೇ? ಕಿರಿದರಲ್ಲಿ ಹಿರಿತನವನ್ನು ಕಾಣುವ ಕನ್ನಡಿಗರ ದೃಷ್ಟಿಯು ವಿಶಾಲಗೊಳ್ಳುತ್ತಿದ್ದರೂ ಅದು ಬಹು ಮಂದಗತಿಯುಳ್ಳದ್ದಾಗಿದೆ. ಅದಕ್ಕೆ ಕನ್ನಡಿಗರ ಕೆಲವು ಸ್ವಭಾವಗಳು ತಡೆಯನ್ನುಂಟುಮಾಡುತ್ತಿವೆ. ಅವುಗಳ ಕಡೆಗೆ ಕನ್ನಡಿಗರ ಲಕ್ಷವನ್ನೆಳೆಯದಿರುವುದು ನನ್ನಿಂದಾಗದು. ಸ್ವರ್ಗವಾಸಿಯಾಗಿದ್ದರೂ, ಸ್ವಭಾಷೆಯ ಹಾಗೂ ಸ್ವದೇಶಬಾಂಧವರ ಮೋಹವು ನನ್ನನ್ನು ಈ ಕೆಲಸಕ್ಕೆ ಎಳೆಯುತ್ತಿದೆ. "ಸತ್ಯವನು ಅರಿದಿಹರೆ ಸತ್ತಹಾಗಿರಬೇಕೆಂ"ಬ ನನ್ನ ವಚನವನ್ನೇ ನಾನು ಈ ಹೊತ್ತು ಮುರಿಯನಿಂತಿದ್ದೇನೆ. ಯಾಕಂದರೆ "ಸತ್ಯವಂತರ ನೀನು

ಸತ್ತರೆಂದೆನಬೇಡ" ಎಂದು ಇಂದಿಗೂ ಸಾರಿಹೇಳುವವನು ನಾನು. ಆದುದರಿಂದ ನಾನು ಉಸುರುತ್ತಿರುವ ವಾಣಿಯು ತಮ್ಮ ಹೃದಯವನ್ನು ಪ್ರವೇಶಿಸಿದ್ದೇ ಆದರೆ, ಅದು ನನ್ನ ಹೃದಯದಿಂದ ಹೊರಟ ವಾಣಿಯೆಂಬುದು ತಾನಾಗಿಯೆ ಸಿದ್ಧವಾಗುತ್ತದೆ. ಕೆಲವು ಕನ್ನಡಿಗರಾದರೂ ಅಖಿಲ ಕರ್ನಾಟಕದ ಪ್ರಗತಿಯನ್ನು ಹಾರ್ದಿಕವಾಗಿ ಹಾರಯಿಸುತ್ತಿರುವದರಿಂದ, ನನ್ನ "ಸುಟ್ಟ" ನಂತಹ ಈ ಬಡಮಾತುಗಳು "ಮಾಣಿಕ"ವಾಗಿ ಪರಿಣಮಿಸದಿರಲಾರವು. ಯಾಕಂದರೆ ಕನ್ನಡ ಜನಾಂಗದ "ಇಚ್ಛೆಯನ್ನು ಅರಿದಿತ್ತ" ಮಾತುಗಳಿವು

ಕನ್ನಡ ಜನಾಂಗವು ಒಳ್ಳೆಯ ಮನಸ್ಸಿನಿಂದ ಒಂದುಗೂಡುವ ದಾರಿಯಾದ ಧರ್ಮವನ್ನು ಬಿಟ್ಟು, ಸರ್ವನಾಶಕವಾದ ಒಡಕಿನ ಜಾತಿತತ್ವವನ್ನು ಗಟ್ಟಿ ಹಿಡಿದಂತೆ ಇಂದು ತೋರುತ್ತಿದೆ. ಯಾಕೆ? ಕಂಡದ್ದನ್ನಾಡಿದರೆ ಕೆಂಡದಂತಾಗುವದಾ? ಕನ್ನಡಿಗರಿಗೆ ಹದಿನೆಂಟೇಕೆ, ನೂರೆಂಟು ಜಾತಿಗಳಿರಲೊಲ್ಲವೇಕೆ. ಅವರಿಗಿರುವದು ಒಂದೇ ಕುಲ. ಅದು ಕನ್ನಡ ಕುಲ. ಅದನ್ನು ಕನ್ನಡದ ಸಮಷ್ಟಿ ಪುರುಷನ ದಿವ್ಯ ದೃಷ್ಟಿಯ ವ್ಯಕ್ತಸ್ವರೂಪವಾದ ಮಹಾಕವಿಗಳು ನಿರ್ಮಿಸಿದ ಮಹಾಸಂಪತ್ತು. ಅದನ್ನು ಹುಡಿಗೂಡಿಸಿ, ಜಾತಿಯ ಭೂತವು ಮೈತುಂಬಿ ನಿಮ್ಮನ್ನು ವಿಕಾರಗೊಳಿಸಿ ಹೇಗೆ ಹುಚ್ಚನಂತೆ ಕುಣಿಸುತ್ತಿದೆ. ತುಸು ಶಾಂತಮನಸ್ಸಿನಿಂದ ವಿಚಾರಿಸಿರಿ. ಆ ಕುಣಿತಕ್ಕೆ— ಈಗಾಗಲೇ ಒಡೆದು ಹೋದ ನಾಡಿನಲ್ಲಿ ಒಡಕು ಮನಸ್ಸು, ಒಡಕು ಹೃದಯಗಳು ಇನ್ನೆಷ್ಟು ಅನಾಹುತ ಮಾಡಲಿರುವವೋ? ಕುಡಿಯುವ ನೀರು ಒಂದು; ನಡೆವ ಭೂಮಿ ಒಂದು; ಸುಡುವ ಅಗ್ನಿಯೂ ಒಂದಾಗಿರುವ ಕನ್ನಡಿಗರಿಗೆ ಕುಲವೊಂದಲ್ಲದೆ ನೂರೆಂಟು ಜಾತಿಗಳೆಲ್ಲಿಂದ ಬರುವವು? ಹಾಗಾದರೆ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ ಮೊದಲಾದವುಗಳು ಭ್ರಾಂತಿಗೆಟ್ಟ ಜಾತ್ಯಭಿಮಾನಿಗಳ ಕುಹಕ ನೀತಿಯೋ ಎಂದು ಕೇಳಬಹುದು. ಆದರೆ ಅವೆಲ್ಲವೂ ಸರಿಯಾಗಿವೆ. ಅವು ಸತ್ಯದ ವಿವಿಧ ಮುಖಗಳು. ವಿವಿಧ ಮುಖಗಳ ಸತ್ಯವನ್ನು ಒಂದೇ ದೇಹಕ್ಕೆ ಹೊಂದಿಸುವದು ಹೇಗೆ? ವಿವಿಧ ಮುಖಗಳೂ ಜೀವಂತವಾಗಿದ್ದರೆ ಅವು ತಮ್ಮ ಗುರಿಯನ್ನು ನೇರವಾಗಿ ಸಾಧಿಸಲು ಸಮರ್ಥವಾಗುತ್ತವೆ. ಆ ಆ

ಜಾತಿಯಲ್ಲಿ ಹುಟ್ಟಿದವರು ದೇವನೊಲಿಸುವ ಸಾಮರ್ಥ್ಯವುಳ್ಳವರಾಗಬೇಕು. ಅದೇ ಜೀವಿತದ ಚಿಹ್ನ. ಯಾಕಂದರೆ "ದೇವನೊಲಿದಾತನೇ ಜಾತ" ನಲ್ಲವೇ? ದೇವನೊಲಿದ ಜಾತಿಯವರು ಒಂದುಗೂಡುವುದೂ, ಅವರಿಗೆ ಕನ್ನಡ ಕುಲದ ಅರಿವಾಗುವುದೂ ಅರಿದಲ್ಲ.

ಅದಕ್ಕೆ ಮಾರ್ಗದರ್ಶಕರಾರು; ಅದಕ್ಕೆ ಬೇಕಾಗುವ ಮೂಲಧನ ನಮ್ಮಲ್ಲೇನಿದೆ ಎಂದೆನ್ನುವಿರಾ? ಅದಕ್ಕೆ ತಿಳುವಳಿಕೆ ಬೇಕು ಮೊದಲು. ಕನ್ನಡನಾಡಿನಲ್ಲಿ ಅದು ಎಷ್ಟು ಬಲವಾಗಿ ಸಾಗುವಳಿಯಾಗುತ್ತಿದ್ದರೂ ಜಗತ್ತಿನ ವೇಗದೊಡನೆ ಅದು ಮಂದಗತಿಯೇ ಸೈ. "ವಿದ್ಯೆಯಿಂದ ಅಧಿಕ ಧನವಿಲ್ಲ" ಎಂಬ ಮಾತು ಇಂದಿಗೂ ಸತ್ಯವೇ. ಆದರೆ "ಮಿಕ್ಕ ಓದುಗಳಿಲ್ಲ ತಿರುಕೆಗೆ" ಎಂಬ ಮಾತು ಅದಕ್ಕೂ ಸತ್ಯವೆಂಬುದನ್ನು ಮರೆತರಾಗದು. ಕನ್ನಡಿಗರ ಸ್ವಾಭಾವಿಕ ಒಲವಿನಂತೆ ವಿದ್ಯಾಪ್ರಗತಿಯಾಗುತ್ತಿಲ್ಲ; ಅವರು ತಿಳುವಿನ ತಳಕ್ಕೆ ಇಳಿಯುತ್ತಿಲ್ಲ; ಆಳವಾಗಿ ಮುಳುಗುತ್ತಿಲ್ಲ; ಮೇಲಿನ ಹಸುರಿಗೇ ಕಂಗೆಟ್ಟವರಾರೆ "ಕುಂಜರವು ವನವ ನೆನೆವಂತೆ" ನೆನೆಯುವ ವನಿಗೆ ಅದರ ಗುಟ್ಟು ಮನದಟ್ಟಾಗುವದು. "ಯಾವ ಒಂದನ್ನು ಅರಿತರೆ ಇನ್ನಾವುದನ್ನು ಅರಿಯುವ ಅವಶ್ಯವಿಲ್ಲವೋ ಆ ಒಂದನ್ನು" ಅರಿಯುವ ದಾರಿಯೇ ಸರ್ವಜ್ಞನನ್ನಾಗಿಸುವುದು.

ಸರ್ವಜ್ಞನೆಂಬವನು ಗರ್ವದಿಂದಾಗುವನೇ? ಸರ್ವರ ಒಳಗಿನಿಂದ ಒಂದೊಂದು ನುಡಿ ಕಲಿತರೆ, ವಿದ್ಯದ ಪರ್ವತವೇ ಕೈವಶವಾಗುವದು. ಸರ್ವರಿಂದ ಒಂದೊಂದು ನುಡಿ ಕಲಿಯಬೇಕಾದರೆ ಅದಕ್ಕೆ ಅಭಿಮಾನ ಕೂಡದು. ನಮ್ರತೆಯಿಲ್ಲದೆ ಅದು ದೊರಕೊಳ್ಳದು ಯಾರಿಂದಲಾದರೂ ಕಲಿಯಬಹುದು; ಯಾರಲ್ಲಾದರೂ ಕಲಿಯಬಹುದು. "ಊರಿಂಗೆ ದಾರಿಯನು ಯಾರು ತೋರಿದರೇನು?" ಅದಕ್ಕಾಗಿ ಅಭಿಮಾನವನ್ನು ತೊರೆಯುವುದು ಅವಶ್ಯವಾಗಿರುವಂತೆ ಆಲಸಿಕೆಯನ್ನೂ ಹೊಡೆದಟ್ಟುವುದೂ ಆವಶ್ಯಕ. "ಆಲಸಿಕೆಯಲಿರುವವರಿಗೆ ಕಲಿಕಲು ಅಂಬಲಿ"ಯೂ ಅಸಾಧ್ಯವಾಗಿರುವಾಗ ಸೂಕ್ಷ್ಮತರವಾದ ತಿಳುವಳಿಕೆ ಹೇಗೆ ಸುಲಭಸಾಧ್ಯವಾದೀತು? ಆದುದರಿಂದ ದುಡಿಮೆ ಬೇಕು; ಆಳಾಗಿ ದುಡಿಯುವ ಉತ್ಸಾಹ ಬೇಕು. 'ಆಳಾಗಬಲ್ಲವನು ಆಳುವನು ಅರಸಾಗಿ." ಅರಸೊತ್ತಿಗೆ ಬೇಕೆನಿಸುವುದು ಸಹಜ; ಆಳಾ

ಗುವ ಬುದ್ಧಿ ಬರುವುದು ಸಹಜವಲ್ಲ. ಅದಕ್ಕೆ ರೂಢಿ ಬೇಕು; ಅದೇ ಸಾಧನೆ.

ದುಡಿಮೆಗೆ ತಕ್ಕ ಪ್ರತಿಫಲವಿಲ್ಲವೆಂಬ ಕೂಗು ಜಗತ್ತಿನೆಲ್ಲೆಲ್ಲ ಮೊಳಗುತ್ತಿದೆ ಅದು ಕನ್ನಡನಾಡಿನಲ್ಲಿಯೂ ಮಾರ್ದನಿಗೊಳ್ಳುತ್ತಿದೆ. ಅಹುದು; ಅದೊಂದು ಹಿರಿಯ ಪ್ರಶ್ನೆಯೇ ಸರಿ. ಅದು ಅನ್ನದ ಆಪತ್ತು; ಹಸಿವೆಯ ಕಿಚ್ಚು. ಜಗತ್ತು ಅನ್ನದೇವನನ್ನು ಬರಮಾಡಿಕೊಳ್ಳಲು ಕೂಗೇ ಕೂಗುತ್ತಿದೆ; ಅದಕ್ಕಾಗಿ ಹುಯಿಲೆಬ್ಬಿಸಿದೆ. ಆದರೆ, ಅದನ್ನು ಬಗೆಹರಿಸಲು ಸಾಮ್ರಾಜ್ಯರಿಗೆ ಶಕ್ಯವಿಲ್ಲ. ತಪಸ್ವಿಗಳೇ ಬೇಕು; ಈಗ ಜಗತ್ತಿನಲ್ಲಿ ಹಬ್ಬಿರುವ ಸರ್ವ ಯುಕ್ತಿ —ಶಕ್ತಿಗಳೂ ಆ ಮಹಾ ಕೆಲಸಕ್ಕೆ ಸಾಕಾಗವು ಅದನ್ನು ನಿಚ್ಚಳಗೊಳಿಸಲು ಜಿಣಿಮಿಣಿ ದೀಪದ ಬೆಳಕು ಸಮರ್ಥವಾಗದು; ವಿಜ್ಞಾನಸೂರ್ಯನು ಬಂದಾಗ ಅದರ ಸಂಪೂರ್ಣ ನಿವಾರಣೆ ಆಗುವದು; ಅದರ ಪೂರ್ವಚಿಹ್ನವು ಪೃಥ್ವಿಯ ಮೇಲೆ ಕಂಗೊಳಿಸುತ್ತ ಇದೆ; ಕನ್ನಡನಾಡು ಪೃಥ್ವಿಗೆ ಹೊರತಲ್ಲವಷ್ಟೆ?

ಆದರೆ ವಿಜ್ಞಾನಸೂರ್ಯನು ಉದಿಸುವವರೆಗೆ? "ತಿರುಕೊಂಡು ತಂದರೂ ಕರಕೊಂಡು ಉಣ್ಣುವ" ದಾರಿಯಿದೆ. ಆ ಬುದ್ಧಿ ಹೇಗೆ ಬಂದೀತು? ಉಳ್ಳವರು ಹಸಿವೆಯಾಗಿಲ್ಲವೆಂದು ಉಣ್ಣುವದಿಲ್ಲ; ಇಲ್ಲದವರು ಅನ್ನ ಸಿಕ್ಕಿಲ್ಲವೆಂದು ಉಣ್ಣುವದಿಲ್ಲ. ಕೂಗಿ ಹುಯಿಲೆಬ್ಬಿಸುವದಕ್ಕೆ ವ್ಯಯವಾಗುತ್ತಿರುವ ಶಕ್ತಿಯು, ಆ ಬುದ್ಧಿಯನ್ನು ಜನತೆಯ ತಲೆಗೆ ತಲುಪಿಸುವುದರಲ್ಲಿಯೂ, ಹೃದಯಕ್ಕೆ ತಗುಲಿಸುವುದರಲ್ಲಿಯೂ ವ್ಯಯಗೊಳ್ಳಬೇಕು. ನಾನು ಈ ಕಾಲಕ್ಕೆ ಕನ್ನಡನಾಡಿನಲ್ಲಿ ಬದುಕಿದ್ದರೆ, ಇಲ್ಲವೆ ಹುಟ್ಟಿ ಬಂದರೆ ನನ್ನ ತ್ರಿಪದಿಗಳನ್ನು ಸಾರುತ್ತ, ತೂರುತ್ತ ತಿರುಗುತ್ತಿದ್ದೆ ಕವಿಯ ಕೆಲಸವನ್ನೂ, ಪ್ರಕಾಶಕರ ಶ್ರಮವನ್ನೂ, ಗಮಕಿಗಳ ಸಾಹಸವನ್ನೂ ನಾನೇ ವಹಿಸಿಕೊಳ್ಳುತ್ತಿದ್ದೆ. ನನಗೆ ಸರಿದೋರುವ ಕೆಲಸವನ್ನು ಇನ್ನೊಬ್ಬರು ಮಾಡಲೊಲ್ಲರೇಕೆಂದು, ಅವರ ಮೇಲೆ ಹರಿಹಾಯದೆ, ನನ್ನ ಸ್ವಭಾವದಂತೆ ಅದನ್ನೆಲ್ಲ ನಾನೇ ಮಾಡಿತೋರಿಸುತ್ತಿದ್ದೆ ಹೊಗಳಿಕೆ – ತೆಗಳಿಕೆಗಳಿಗೆ ಸೊಪ್ಪುಹಾಕದೆ ಕಂಡದ್ದನ್ನಾಡುವ ನನ್ನ ಸ್ವಭಾವವನ್ನು ಕನ್ನಡಿಗರು ಅರಿತಿದ್ದೀರಲ್ಲವೇ? ಕಂಡದ್ದನ್ನಾಡುವುದು ಉಚಿತವೆಂದು ಕಂಡಹಾಗೆ ಆಡಿಬಿಡುವುದು ತರವಲ್ಲ ಇದೆಲ್ಲ ನನ್ನ ಹೆಮ್ಮೆಯ ಮಾತಲ್ಲ; ಆತ್ಮವಿಶ್ವಾಸ.

ವಿದ್ಯೆಯಿರಲಿ, ಬುದ್ಧಿಯಿರಲಿ, ದ್ರವ್ಯವಿರಲಿ ಅದು ಏನಿದ್ದರೂ ಸಂಪತ್ತೇ ಸರಿ. ಆ ಸಂಪತ್ತು ತನಗಾಗಲೆಂದೂ ತನ್ನದಾಗಲೆಂದೂ ಮನುಷ್ಯನು ಆಶಿಸುವುದು ಸ್ವಾಭಾವಿಕವದೆ; ಅದು ತಪ್ಪು ಅಲ್ಲ. ಆದರೆ ಅದರ ಒಲವು ತಪ್ಪಾಗಿರಬಹುದು. ಬಚ್ಚಿಟ್ಟದ್ದೆಲ್ಲವೂ ತನಗಾಗುವದಿಲ್ಲ ವೆಂದೂ, ಅಂತೆಯೇ ಅದು ತನ್ನದಲ್ಲವೆಂದೂ ಯಾರಿಗಾದರೂ ತಿಳಿಯುತ್ತದೆ. ಇದುದರಿಂದ "ಬಚ್ಚಿಟ್ಟಿದ್ದು ಪರರಿಗೆ"ನುವುದು ಸ್ಪಷ್ಟ. ಈ ಮಾತು ಬಹು ಜನರಿಗೆ ಅನುಭವಕ್ಕೂ ಬಂದಿರಲು ಸಾಕು ಆದರೆ "ಕೊಟ್ಟಿದ್ದು ತನಗೆಂ"ಬ ಮಾತನ್ನು ಮನಗಾಣಿಸುವುದು ಕಠಿಣ; ಅದನ್ನು ಬುದ್ಧಿಗೊಪ್ಪುವಂತೆ ವಿವರಿ ಸುವುದು ಸುಲಭವಲ್ಲ. "ಕಲ್ಲಿಕ್ಕ ಕಡಬು ಕೊಟ್ಟರೆ, ದ್ಯಾಮುಕ್ಕ ದೋಸೆ ಕೊಡುವಳು" ಎನ್ನುವ ಗಾದೆಯು ಕನ್ನಡಿಗರಿಗೆ ಪಳಿಯದಾಗಿದೆ ಅದೊಂದೇ ಮಾತನ್ನು ಮನನ ಮಾಡಿದರೆ, "ಕೊಟ್ಟಿದ್ದು ತನಗೆ" ಎಂಬ ತಿಳಿವು ಹೃದಯದಲ್ಲಿ ಹೊಳೆಯುವುದು; ಬೆಳಗುವದು.

ಕೊಡುಗೆಯ ನೀತಿಗೂ ಒಂದು ಎಲ್ಲೆ ಬೇಕು. ಕೊಟ್ಟದ್ದೆಲ್ಲ ತನಗಾ ಗುವದೆಂದು ಸಿಕ್ಕಾಪಟ್ಟೆ ಕೊಡುವದೆಂದರೆ, ಕಬ್ಬು ಸವಿಯೆಂದು ಬೇರು ಸಹ ತಿಂದ ಹಾಗೆ. ಈಗ ಉತ್ತಮನಾದವಂಗೆ ಕೊಡಬೇಕೆನ್ನುವ ಕಟ್ಟಳೆಯು ಸರ್ವಸಾಮಾನ್ಯವಾಗತೊಡಗಿದೆ. ಅದಕ್ಕೂ ಒಂದು ಆಡಿ ಮುಂದಿಟ್ಟು "ಸೊಡರೆಣ್ಣೆ ತೀರಿದರೆ ಕೊಡನೆತ್ತಿ ಹೊಯ್ಯುವರೇ?" ಎಂಬ ಚುಟಿಕೆ ಮಲ್ಲಿಯ ತತ್ವದ ಸಹಾಯವನ್ನು ಪಡೆಯಬಹುದು.

ಕನ್ನಡಿಗರೇ, ಸ್ವಲ್ಪದರಲ್ಲಿ ಹೇಳಹೊರಟ ನಾನು ಈಗಾಗಲೇ ಹೆಚ್ಚಾಗಿ ಹೇಳಿದೆನೆಂದು ತೋರುತ್ತದೆ. ಮನ್ನಿಸಬೇಕು.

ಇತಿ—ತಮ್ಮೆಲ್ಲರ ಆತ್ಮಬಂಧು,

**ಸರ್ವಜ್ಞ**

"ಆತ್ಮೈವಹ್ಯಾತ್ಮನೋ ಬಂಧುಃ"

೧೨

# ಮುದ್ದಣನ ರಸಗನ್ನಡ

ನನ್ನ ನಚ್ಚಿನ ಹೊಸಗಾಲದ ಕನ್ನಡಿಗರೇ,

ಉಳಿದೊಡಂ ಅಳಿದೊಡಂ ಬಟ್ಟೆದೋರಿದ ಪುರಾಣ ಕಥೆ ಹೇಳುವ ನೆವ ಮಾಡಿ, ನೀರಿಳಿಯದ ಗಂಟಲೊಳ್ ಕಡುಬಂ ತುರುಂಕಿದವನೆಂದು ಕೆಲವು ತರುಣರು ಗೊಣಗುಟ್ಟಲೊಲ್ಲರೇಕೆ; ನಾನು ಬದುಕಿದ್ದ ಕಾಲವೇ ಬಹು ವಿಚಿತ್ರವಾದುದಿತ್ತು. ಸಂಪ್ರದಾಯ ಮಾರ್ಗವು ಪೂರ್ಣ ಅಳುಕಿದ್ದಿಲ್ಲ ನೂತನ ಮಾರ್ಗವು ಚೆನ್ನಾಗಿ ಕಾಣಿಸಿಕೊಂಡಿರಲಿಲ್ಲ. ಆದಕಾರಣ ಅವೆರಡನ್ನೂ ಸಂಗಮಗೊಳಿಸುವ ಎತ್ತುಗಡೆಗೆ ತೊಡಗಿದೆ ನಾನು. ಆ ಯುಕ್ತಿಯನ್ನು ಅನುಸರಿಸಿದ್ದರಿಂದಲೇ ಎರಡು ಬಣದವರ ದೃಷ್ಟಿಯನ್ನೂ ಏಕಕಾಲಕ್ಕೆ ಆಕರ್ಷಿಸುವುದಕ್ಕೆ ನನಗೆ ಸಾಧ್ಯವಾಯಿತೆಂದು ಬಲ್ಲವರು ಒಪ್ಪುತ್ತಾರೆ. ಪದ್ಯಂ ವಧ್ಯಂ, ಗದ್ಯಂ ಹೃದ್ಯಂ ಎಂದು ಬಾಯಿಬಿಚ್ಚಿ ಹೇಳಿದವ ನಾದರೂ, ತೆಗಳಿದ ಪದ್ಯವನ್ನೂ ಹೊಗಳಿದ ಪದ್ಯವನ್ನೂ ಸುಸಂಗತವಾಗಿ ಸಮ್ಮೇಲನಗೊಳಿಸಿದ್ದೇನೆ. ನನ್ನ ಬಾಯಿಂದ ತೆಗಳಿಸಿಕೊಂಡ ಪದ್ಯವು ಗದ್ಯದ ರೂಪು ಧರಿಸಿ ಬಂದಿದೆ; ನನ್ನಿಂದ ಕೊಂಡಾಡಿಸಿಕೊಂಡ ಗದ್ಯವು ಪದ್ಯದ ಮುಸುಕು ಹಾಕಿ ನಿಂದಿದೆ. ನನ್ನ ಕಾವ್ಯವು ವೃತ್ತಿಗಂಧಿಯ ಹಾಗೆ ಕಾಣಿಸಿಕೊಳ್ಳುವದಾಗಿ—ಅರ್ಧನಾರೀ ನಟೇಶ್ವರನೆನಿಸುತ್ತಿದೆ

ಈವಗೆಯ ನುಡಿಗಬ್ಬಂ ಮುಂತಿಲ್ಲ ಪಿಂತಿಲ್ಲಮೆಂದಾಯ್ತೆಂದು, ಮನೋರಮೆಯು ಮುತ್ತಬ್ಬೆಯಾಣೆ ಮಾಡಿ "ರಾಮಾಶ್ವಮೇಧ'ದ ಬಗ್ಗೆ ಅಭಿಪ್ರಾಯಪಟ್ಟಳೆಂದು, ಕನ್ನಡಿಗರೆಲ್ಲರ ಅಭಿಪ್ರಾಯವೆಂದು ನಾನು ತಿಳಕೊಂಡಿಲ್ಲ. ಯಾಕೆಂದರೆ--ನಾನು ಮನೋರಮೆಯ ಮುದ್ದಿನ ರಸ! ಅಂತೆಯೇ ಆಕೆಯು — "ನಿನ್ನ ಪೆಸರೆಂತಂತು ಕಬ್ಬಮುಂ ಮುದ್ದು ಮುದ್ದಾಯ್ತು ಜಗಕೆ" ಎಂದು ಶುಭಾಶಯವನ್ನು ಕೋರಿದಳು. ಅದೇ ಮನೋರಮೆಯು ತನಗೆ ಬೇಸರೆನಿಸಿದಾಗ—"ಅಡಿಮುಡಿಯಿಲ್ಲದ ನಿನ

ಕತೆಗೆ ಎನಗೆ ತಲೆನೋವುದು" ಎಂದು ನಿರ್ದಾಕ್ಷಿಣ್ಯವಾಗಿ ನುಡಿಯುತ್ತಾಳೆ. ಅದೇ ಸಕಲಗುಣ ಸಂಪನ್ನೆ ಮುಗುದೊಮ್ಮೆ ತೂಕಡಿಸುತ್ತ—"ತೂಕಡಿಸದೇ ವೆನೆಂ! ಕವಿಗಳ್ಗೆ ಪುರುಳ ಮರದ ಗುರ್ದಿನಾಟದ ಬರುರಗಳೆಯು ನಿಡುಗತೆ" ಯೆಂದು ತಪ್ಪಿನಿಂದ ತಪ್ಪಿಕೊಂಡು ಬಿಡುತ್ತಾಳೆ. ಒಟ್ಟಾರೆ ರಾಮಾಶ್ವಮೇಧ ವನ್ನು ಕೇಳಿದ "ಜಾಣೆಲಿವೆಣ್ಗಳೆ ಕೊಂಡಾಡುವರಲ್ಲದೆ ಬಲ್ಲರೇನೊಲ್ವರೆ?"

ನಿಜವಾಗಿಯೂ ಮುದ್ದಣ—ಮನೋರಮೆಯರ ಸರಸ ಸಲ್ಲಾಪಗಳೇ ಆ ಕಥೆಗೆ ಜೀವವಿತ್ತಿವೆ. ಮನೆಯೆನಿಸಬೇಕಾದರೆ ಮನೆಯುವಳು ಸರಸಿ ಯಾಗಿರಬೇಕು; ಅಲ್ಲಿ ಸರಸ್ವತಿ ಹರಿದು ಬರುವಳು; ಮನೆಯುವಳು ನಗು ಮುಖದವಳಾಗಿರಬೇಕು; ಅಲ್ಲಿ ರಸಿಕತೆಯು ಲೇಸಾಗಿ ಆಟವಾಡುವದು. "ಶ್ರೀರಾಮಾಶ್ವಮೇಧ"ದಲ್ಲಿ ಬರುವ ಕಾಲ್ಪನಿಕ ದಂಪತಿಗಳ ಸರಸತೆ ಯನ್ನೋದಿ ಹರ್ಷಿಸುವುದಕ್ಕಿಂತ ಮನೆಮನೆಗೆ ಮುದ್ದಣ-ಮನೋರಮೆ ಯರು ಕಾಣಿಸಿಕೊಳ್ಳಲೆಂದು ನನ್ನ ಹಾರಯಿಕೆ. ಮಲೆನಾಡಿನ ಹೆಣ್ಣಾದ ಮನೋರಮೆಯನ್ನು ಪರ್ಯಾಯದಿಂದ "ಮಲೆಯೊಳೆ ನೆಲೆಗೊಂಡಿರ್ಪ ನಾಲ್ಗ್ರೈಯು ದೇವರಿಂ"ದರೆ ಮಂಗನ ಮುಸುಡಿಯುವಳೆಂಬ ಅರ್ಥ ಹೇಗೆ ಆಗುವುದು? "ಎರಗ್ಗಿಣ್ಣಗೆಂತು ಅಂತೊಪ್ಪುವ ಬಟ್ಟ ನುಣ್ಗಣ್" ಎಂದಾಗ ಗೂಗೆಗಣ್ಣಿನವಳೇ ಎಂದಾಂತಾಯ್ತೆಂದು ಹೇಗೆ ತಿಳಿಯುವವು? ನಿಚ್ಚನಿಡು ಗುಂಪಿನುದ ಬಂಕದ ಮೆಚ್ಚುಗಾರ್ತಿಯೆಂದರೆ, ಚಕ್ಕುಲಿಗಳನ್ನು ಮೆಚ್ಚು ಗೊಂಡಬರುವಳು; ಅಚ್ಚಿಗಾರನ ಬೆಚ್ಚಪಚ್ಚೆಯು ಕೈಗನ್ನಡಿಯೆಂದಾಗ ಆವಳುಂ ಪುರಗದಲೆಯುಂ ಸಲ್ಲಿಸಬರುವಳು. ಎನ್ನ ನಿಚ್ಚಪೂಜೆಯ ಕಟ್ಟಿಟ್ಟಿನ ಪ್ರಾಣಲಿಂಗವೇ, ಎಂದು ಸಂಬೋಧಿಸಿದಾಗ ಪ್ರಸನ್ನಳಾಗಿ ಕಬ್ಬು ತೆಂಗಾಯ್ಗಳನ್ನು ಪರಮಾನಗೆಯ್ಯುವಳು. ಬಲ್ಲಿದಸುಗಾರ್ತಿಯಾದವಳು ಕಥೆ ಕೇಳಿದ ಬಳಿಕ ಮಚ್ಚೆಂದು "ಎನ್ನನೆ ನಾನೀವೆಂ" ಎನ್ನುವಳು. ಆವಳಿಗೇನು ಗೊತ್ತು ಮುನ್ನವೇ ತನ್ನ ತಾಯ್ತಂದೆಗಳು ಪತಿಗಿತ್ತಿದ್ದಾ ರೆಂಬುದು? ಕೈವಿಡಿದ ಬಳಿಕ ನಲ್ಲಗೆ ಕಯ್ವಿಡಿದ ನಲ್ಲನೇ ಗತಿ, ನಲ್ಲನೇ ಮತಿ! ಕಯ್ವಿಡಿದ ನಲ್ಲನೇ ಮುನಿವೆಡೆಯೊಳಾರೇನೆಂಗುಂ? ಹೆಣ್ಣಿನ ಪರಮಾದರ್ಶವೆಂದು ನಾವು ಸೀತಾಮಾತೆಯನ್ನು ಕಾಣುವೆವು. ಲಕ್ಷ್ಮಣನು ಅತ್ತಿಗೆಯನ್ನು ಕಾನನದಲ್ಲಿ ಬಿಟ್ಟುಕೊಟ್ಟು ಮರಳುವಾಗ ಸೀತಾಮಾತೆಯು

ನಗೆ ವನವಾಸವುಂಟಾದುದನ್ನು ತಿಳಿದು “ ಕುರುಂಬನ ಕುತ್ತಕ್ಕೆ ಕುರಿಯು
ತ್ತಮೆ ಮದ್ದಾಯ್ತು ? ” ಎಂದು ಉಸಿಮಿಸಿಗೊಂಡರೂ ಶ್ರೀರಾಮಚಂದ್ರ
ಗೆ ಹೇಳಿಕಳಿಸುವ ಸಂದೇಶವೇನೆಂದರೆ —“ನಿನ್ನಾಣತಿಗಬಲೆ ಮರುಗಿದಳಿಲ್ಲ;
ಹಾನ್ನುಡಿದಳಿಲ್ಲ; ಮುನಿಸಾಂತಳಿಲ್ಲ; ಬೆಜಿನಳಿಲ್ಲ; ಕೂಳ್ಕುದಿಗೊಂಡಳಿಲ್ಲ;
ಹಾರಿದಳಿಲ್ಲ. ನೀನೇ ಗತಿಯೆಂದು ನಿನ್ನಡಿಯಂ ನೆನೆಯುತೆ ಕಳೆವ್ವೊಳ್ವಂ
ಾರುತಿರ್ಪಳ್.” ಈ ನುಡಿಗಳು ಕೈಲಾಗದ ಅಬಲೆಯಿಂದ ಬರಲಾರವು;
ೀರರಮಣಿಯರಿಂದ ಬರತಕ್ಕವುಗಳಾಗಿವೆ. ವಿನಯಶಾಲಿಯೂ ಸಹನ
ೀಲೆಯೂ ಆದ ಸೀತಾಮಾತೆಯು ಇಲ್ಲಿ ಹೀಗೆ ಕಾಣಿಸಿಕೊಂಡರೆ, ದುಷ್ಟ
ಂಹಾರೆಯಾಗಿ ಸಹಸ್ರಕಂಠ ರಾವಣನ ವಧೆಯ ಕಾಲಕ್ಕೆ ಕರಾಳರೂಪ
ನ್ನು ತಾಳಿದಾಗ ಕಾಣಿಸಿಕೊಳ್ಳುವ ಚಿತ್ರವನ್ನೊಂದಿಷ್ಟು ನೆನಸೋಣ —

“ ತಿರ್ದಿದ ಕೂಂದಲ್ ನಿಗುರ್ದು ಕೆದರ್ದಿರೆ, ಪೆರೆನೊಸಲ್ ಪೆರ್ನೊಸ
ಾಗಿರೆ; ಎಸಳ್ಗಣ್ ಗುಳಿಗಣ್ಣಾಗೆ; ನಗೆಮೊಗಂ ಉರಿಮೊಗವಾಗೆ; ಸುಲಿಪಲ್
ಡುವಲ್ಲಾಗೆ; ತಳಿರ್ಗಾಲಿಗೆ ಜೋಲ್ವಾಲಿಗೆಯಾಗೆ ಸೀತೆ ಕರಾಳಮುಖಿ
ಯಾದಳ್. ಕಕ್ಕಸಮಾದ ನಾಲ್ದೋಳುಂ, ಕಲ್ಲೆರ್ದೆಯುಂ, ಬಲ್ದೊಡೆ
ಳುಂ ಮೊಗಕ್ಕೆ ತಕ್ಕುವಾದುವು. ಗಳದ ರುಂಡಮಾಲೆಯುಂ, [illegible]
ಲ್ವದೊಡವುಂ ವಿಟ್ಟಿಸಲ್ತೀರದು. ಇಂತು ಲೋಕೋತ್ತರ ಸುಂದರಿ
ಪ್ಪಾ ಸೀತೆ ಒಡನೆ ಅದ್ಭುತ ರೂಪದಿಂ ಮಾಕಾಳಿ’ಯಾದಳು. ಒಲಿದರೆ
ಾರಿ, ಮುನಿದರೆ ಮಾರಿ. ಜಗಜ್ಜನನಿಯು ಒಂದು ಕೈಯಲ್ಲಿ ಹಾಲಿನ
ಟ್ಟಲು ಹಿಡಿದಿದ್ದರೆ, ಇನ್ನೊಂದು ಕೈಯಲ್ಲಿ ಓಜುಗಟ್ಟಿಗೆ ತೆಗೆದುಕೊಂಡಿರು
ತ್ತಾಳೆ. ತಾಯಿಯಿರಲಿ, ಹೆಂಡತಿಯಿರಲಿ, ಅಕ್ಕ, ತಂಗಿ, ಮಗಳು, ಸೊಸೆ
ಯಾರೇ ಇರಲಿ. ಹೆಣ್ಣಿನೊಡನೆ ಒಲಿದ ಒಗೆತನ ಸಂಪಾದಿಸದಿದ್ದರೆ
ಂಸಾರವಾಗುವದಿಲ್ಲ; ನಿಗ್ಗರದ ಕುತ್ತಾಗುವದು.

ನನ್ನ ತಾಯಿ ಹದಿನೈದು ವರುಷದ ಕನ್ನಕ್ಕೆಯಾಗಿರುವಾಗಲೇ ನನ್ನನ್ನು
ಡೆದಳು; ನಾನವಳನ್ನು ತಾಯಿಯಾಗಿ ಪಡೆದೆನು; ಅವಳು ನನ್ನನ್ನು
ುದ್ದಿನ ಗೊಂಬೆಯಾಗಿ ಪಡೆದಳು. ಮುದ್ದಿನ ಗೊಂಬೆಗೆ ‘ ಮುದ್ದಣ ’
ಂದು ಮುದ್ದಾಡಿದಳು; ಮುದ್ದಿಟ್ಟಳು; ಮುಂಡಾಡಿದಳು. ಆ ಮುದ್ದಾ

ಟವು ಹರಕೆಯಾಗಿ, ರಕ್ಷಾಕವಚವಾಗಿ ನನ್ನ ಬಾಳನ್ನು ಬಣ್ಣಿಸಿತು; ನನ ಜೀವವನ್ನು ಹಣ್ಣಿಸಿತು; ಹೃದಯದ ಹುಳಿಕಾಯಿ ದೋರೆಯಾಗಿ ಮಾಗಿತು; ರಸವೊಸರಿತು. ಅದುವೆ ನನ್ನ ಕಾವ್ಯಪರಿಣತಿ.

ಲಕ್ಷ್ಮೀನಾರಣಪ್ಪ ನನ್ನ ನಿಜವಾದ ಹೆಸರು. ಅದು ವಾಡಿಕೆಯ ಹೆಸರಾಗಿಯೆ ಉಳಿಯಿತಲ್ಲದೆ ಅದರಿಂದ ಬಡತನ ಹಿಂಗಲಿಲ್ಲ. ಹಳ್ಳಿಯಲ್ಲಿ ಹುಟ್ಟಿದ ಇನ್ನೊಂದು ತಪ್ಪು ಮಾಡಿದ್ದರಿಂದ ಹೆಚ್ಚು ವಿದ್ಯಾಭ್ಯಾಸವಾಗಲಿಲ್ಲ. ಹಳ್ಳಿಯ ಶಾಲೆಯಲ್ಲಿ ಸಿಗತಕ್ಕಷ್ಟನ್ನು ಮಾತ್ರ ದೊರಕಿಸಿ, ಇಂಗ್ಲಿಷ ಅಭ್ಯಾಸಕ್ಕೆ ಮುಂದುಗಾಣದೆ "ಬಡವರ ಬಂಧು" ವಾದ ಟ್ರೇನಿಂಗ್ ಸ್ಕೂಲನ್ನು ಆಶ್ರಯಿಸಬೇಕಾಯಿತು. ಅಲ್ಲಿ ಕದ ತಿನ್ನುವ ಹಸಿವೆಯಾದವನಿಗೆ ಹಪ್ಪಳ ಊಟಾದೀತೇ, ಎನ್ನುವಂತೆ ಅಲ್ಲಿ ಸಿಕ್ಕುವ ವಿದ್ಯಾಭ್ಯಾಸದಿಂದ ತೃಪ್ತಿಯುಂಟಾಗಲಿಲ್ಲ. ಟ್ರೇನಿಂಗ್ ಸ್ಕೂಲಿನ ಕನ್ನಡ ಅಭ್ಯಾಸದೊಡನೆ ಇಂಗ್ಲಿಷ ಪಂಡಿತರ ಆಶ್ರಯದಲ್ಲಿ ಇಂಗ್ಲಿಷ ವಿದ್ಯಾಭ್ಯಾಸವನ್ನೂ ಸಾಗಿಸಿದ್ದರಿಂದ ಮೈತುಂಬ ಮನತುಂಬ ಕೆಲಸ ದೊರೆತಂತಾಯಿತು.

ಆದರೇನು ? ಕಾವ್ಯಜೀವನಕ್ಕೆ ನೀರೆರೆದು—ನನಗೆ ನೆರವಿತ್ತ ವಿದ್ಯೆಯೆಂದರೆ ಯಕ್ಷಗಾನ ಪ್ರಸಂಗ. ನಿರ್ಬಂಧಸೃಷ್ಟಿಯಾದ ಯಕ್ಷಗಾನದವರ ಪರಿಚಯ-ಸ್ನೇಹಗಳು ಸೆಗ್ಗಳವಾಗಿ ಲಭಿಸಿದವು. ಭಾಗವತರಾಟದಲ್ಲಿ ಪಾತ್ರಗಳು ನುಡಿಯುವ ಪ್ರಾಸಬದ್ಧವಾದ ಮಾತುಗಳಿಗೆ ಮೋಹಗೊಂಡೆನು; ಪಾತ್ರಗಳು ಅಲ್ಲಲ್ಲಿ ವಿರಾಮಚಿಹ್ನದಂತೆ ಹಿಮ್ಮಡು ಬಡಿಯಲು ಉಂಟಾದ ಗೆಜ್ಜೆಯ ಸಪ್ಪಳಕ್ಕೆ ಕಿವಿಮಾರುಹೋದವು. ಈ ರಸಿಕತೆಯು ತುಂಡು ಪದ್ಯಗಳನ್ನು ಕಟ್ಟುವದಕ್ಕೆ ಕೈಚಾಚಲು ಕಲಿಸಿತು. ಆ ತುಂಡು ಪದ್ಯಗಳನ್ನು ಯಕ್ಷಗಾನ ಪ್ರಸಂಗದಲ್ಲಿ ಪ್ರಯೋಗಿಸಿ ತೋರಿಸಲು ಜನಮೆಚ್ಚಿದ್ದರಿಂದ ಹುರುಪುಗೊಂಡು, ಪ್ರಾಸಬದ್ಧವಾಗಿ ಮಾತನಾಡಿ ಸರಿಕರನ್ನು ವಿನೋದಗೊಳಿಸುತ್ತ ಬಂದುದು ನನ್ನ ವಿದ್ಯಾಭ್ಯಾಸ ಸಾಗಿದಂತಾಯ್ತು. ಆ ಬಯಲಾಟದ ಮೇಳವೇ ನನಗೆ ವಿಶ್ವವಿದ್ಯಾಲಯವಾಯಿತು; ಅಲ್ಲಿ ಕಲಿತೇ ನಾನು ಪದವೀಧರನಾದೆನೆಂದು ಹೇಳಬಹುದು.

ಒಳಗೆ ನಡೆದದ್ದು ಸಾಹಿತ್ಯವಿಕಸನ; ಹೊರಗೆ ಅಭ್ಯಸಿಸಿದ್ದು ಶಿಕ್ಷಕವೃತ್ತಿ. ಇವೆರಡರಲ್ಲಿ ಯಾವುದೂ ಹೊಟ್ಟೆಯ ತೊಡಕನ್ನು ಸರಿಯಾಗಿ

ಬಿಡಿಸಲಾರದಾಯಿತು. ಆದ್ದರಿಂದ ಅದಕ್ಕೆ ಸಮರ್ಥವಾಗಬಹುದಾದ ಮೂರನೆಯ ದಾರಿ ಹಿಡಿಯಬೇಕಾಯಿತು. ಅಂಗಸಾಧನೆ ಕಲಿಯುವುದ ಕ್ಕಾಗಿ ಮದ್ರಾಸಿಗೆ ಕಳಿಸಲ್ಪಟ್ಟೆನು. ಸರಕಾರವೇ ನನ್ನ ವೆಚ್ಚ ವಹಿಸಿ ಕೊಂಡಿತು. ಅಲ್ಲಿ ತೇರ್ಗಡೆ ಹೊಂದಿ ಉಡುಪಿಗೆ ಹಿಂದಿರುಗಿ ಬಂದ ಮೇಲೆ ಅಲ್ಲಿಯ ಹೈಸ್ಕೂಲಿನಲ್ಲಿ ತಾಲೀಮು ಕಲಿಸುವ ಶಿಕ್ಷಕನಾದೆನು. ಅದಕ್ಕೆ ಪ್ರತಿಫಲವು ಪ್ರತಿ ತಿಂಗಳಿಗೆ ಹತ್ತು ರೂಪಾಯಿ ಕನ್ನಡಿಗರೇ, ಮೇವು ಹಾಕಿ ಮುಗದಾಣಿ ಹಿಡಿದಂತೆ ಉತ್ತಮ ಸಾಹಿತಿಗಳನ್ನು ಸಾಯಹೊಡೆಯ ಬೇಡಿರಯ್ಯಾ ! ಸಿದ್ಧ ಸಾಹಿತಿಯ ಮಂತ್ರವೆಂದು ಪರಿಹಾಸಕ್ಕಾಗಿ ನಾನಂದ "ಭವತಿ ಭಿಕ್ಷಾಂ ದೇಹಿ"ಯನ್ನು ಸಾಹಿತಿಯನ್ನು ಬಿಟ್ಟು ತೊಲಗುವಂತೆ ಏರ್ಪಾಡು ಮಾಡುವುದು ನಿಮ್ಮ ಕರ್ತವ್ಯ. ಈ ಮಾತನ್ನು ನನಗಾಗಿ ಹೇಳುತ್ತಿರುವದಿಲ್ಲ. ನನ್ನಂಥ ಅನೇಕ ಸಾಹಿತಿಗಳು ನಾನು ಪಟ್ಟ ಪಾಡಿನಲ್ಲಿ ತೊಳಲುತ್ತಿರುವುದೂ, ಅವರು ಎಂಥ ನೋವಿಗೀಡಾಗಿದ್ದಾರೆಂಬುದೂ ನನಗೆ ಗೊತ್ತಿದೆ. ಅದರ ಸವಿಸುಖಗಳನ್ನು ನಾನುಂಡಿದ್ದೇನೆ. ಅಂತೇ ನಿಮಗೆ ಕೇಳಿಕೊಳ್ಳುವೆನು— ನಿವಾರಣೋಪಾಯ ಕೈಕೊಳ್ಳಿರೆಂದು.

ಹತ್ತು ರೂಪಾಯಿಗಳು ನನ್ನ ಹೊಟ್ಟೆಗೆ ಅನ್ನವಾದ್ದರಿಂದ ಅದನ್ನು ಉಂಡು ಹೈಸ್ಕೂಲಿನ ವಿದ್ಯಾರ್ಥಿಗಳಿಗೆ ಈ ಜಡಶರೀರವು ಅಂಗಸಾಧನೆ ಕಲಿಸಲು ತೊಡಗಿತು. ಅದರ ಜೊತೆಗೆ ಪೂಜ್ಯ ಮುಳಿಯ ಸುಬ್ಬರಾಯರು ಉಡುಪಿಯ ಹೈಸ್ಕೂಲಿನಲ್ಲಿ ಉಪಾಧ್ಯಾಯರಾಗಿದ್ದುದರಿಂದ ಅವರ ಸಹವಾಸ ದೊರೆಯಿತು. ಆ ಸಹವಾಸವು ನನ್ನ ನೆತ್ತಿಯ ಊಟವನ್ನು ಒದಗಿಸಿ ಕೊಟ್ಟಿತು. ಅವರ ಪ್ರೋತ್ಸಾಹದಲ್ಲಿ ಒಂದೆರಡು ಯಕ್ಷಗಾನಗಳನ್ನು ಬರೆದೆ. ಆ ಕಾಲಕ್ಕೆ ನನಗೆ ಸಂಸ್ಕೃತದ ಒಂದಿಷ್ಟೂ ಪರಿಚಯವಿರಲಿಲ್ಲ. ನನ್ನ ಸಾಹಿತ್ಯಜೀವನದ ಮಾವಿನ ಗಿಡವು ಮರವಾಗಿರದಿದ್ದರೂ ಹೊಸದಾಗಿ ಕಾಯಿ ಬಿಟ್ಟಿತೆಂದು ಅದನ್ನು— 'ಕುಮಾರ ವಿಜಯ' ಯಕ್ಷಗಾನವನ್ನು ಗುರುವಿಗೆ ಅರ್ಪಿಸಿದ ಕಾರಣ, ಮೊದಲತುತ್ತಿನ ವಿಷವುಂಡ ಗುರುಗಳ ಅಗಾಧ ಕೃಪೆಯಿಂದ ಉಳಿದ ತುತ್ತುಗಳೆಲ್ಲ ಅಮೃತಗ್ರಾಸವಾಗಿ ಪರಿಣಮಿ ಸಿದವೆನ್ನಬೇಕು.

ಶಬ್ದಮಣಿದರ್ಪಣಾದಿ ವ್ಯಾಕರಣಗಳು ದೈನಿಕ ಪಾರಾಯಣ ಪುಸ್ತಕಗಳೆಂದೂ, ಹಳಗನ್ನಡ ಭಾಷಾ ವಾಗ್ದೇವಿಯೇ ಇಷ್ಟದೇವತೆಯೆಂದೂ, ಅವುಗಳಲ್ಲಿಯ ಅತ್ಯಾಸಕ್ತಿಯೇ ದೃಢಭಕ್ತಿಯೆಂದೂ ನಮ್ಮ ವಿದ್ಯಾಗುರುಗಳು ಬಣ್ಣಿಸಿದ್ದು ಯಥಾರ್ಥವೆಂದು ಒಪ್ಪಿಕೊಳ್ಳುವೆನಾದರೂ "ಈ ದೇವತೆಯು ಪ್ರಸನ್ನಚಿತ್ತಳಾಗಿ ಹಳಗನ್ನಡದ ನೂತನ ಭಾಷಾಶೈಲಿಯನ್ನು ವರಪ್ರದಾನವಾಗಿತ್ತಳು" ಎನ್ನುವ ಮಾತನ್ನು ಹೇಗೆ ಒಪ್ಪಿಕೊಳ್ಳಲಿ ?

ನಾನು "ಅದ್ಭುತ ರಾಮಾಯಣ"ವನ್ನೇ ಬರೆದಿರಲಿ, "ಶ್ರೀರಾಮ ಪಟ್ಟಾಭಿಷೇಕ"ವನ್ನೇ ಬರೆದಿರಲಿ, "ರಾಮಾಶ್ವಮೇಧ"ವನ್ನೇ ರಚಿಸಿರಲಿ, ಅವೆಲ್ಲಕ್ಕೆ ನನ್ನ ಗುರುಗಳ ಅರ್ಥ ಪುಣ್ಯ ಖರ್ಚಾಗದೆ ಇದ್ದಿದ್ದರೆ ನನ್ನಿಂದ ಆ ಕೆಲಸವೇ ಆಗುತ್ತಿರಲಿಲ್ಲವೆಂದು ವಿನಯಪೂರ್ವಕವಾಗಿ ಒಪ್ಪಿಕೊಳ್ಳುತ್ತೇನೆ. ಸಂಸ್ಕೃತದ ಪರಮ ಪೌಷ್ಟಿಕವನ್ನು ನನ್ನ ಗುರುಗಳು ತುತ್ತುಮಾಡಿ ಉಣ್ಣಿಸಿರದಿದ್ದರೆ, ನಾನು ಕನ್ನಡ ಕೃತಿಗಳನ್ನು ರಚಿಸಲಿಕ್ಕೆ ಸಾಧ್ಯವೇ ಆಗುತ್ತಿರಲಿಲ್ಲ 'ಅದ್ಭುತ ರಾಮಾಯಣ'ವನ್ನು ಬರೆದು ಮುಗಿಸಿದ ಮೇಲೆ "ಪುರಾತನ ಗ್ರಂಥಸಂಗ್ರಹದಲ್ಲಿ ದೊರೆತ ಅನಾಮ ಕರ್ತೃಕ ಗ್ರಂಥ"ವೆಂದು ಹೇಳಿ ಅದನ್ನು ಮುದ್ರಿಸಲಿಕ್ಕೆ "ಕಾವ್ಯಮಂಜರಿ" ಗ್ರಂಥಮಾಲೆಯ ಸಂಪಾದಕರಿಗೆ ಕಳಿಸಿದೆನು. ಮೋಸವು ದೋಷವೆನಿಸಿದರೂ ದೋಷ ಮಾಡಿರದಿದ್ದರೆ ನನ್ನ ಕೆಲಸ– ಕನ್ನಡದ ಕೆಲಸವಾಗುತ್ತಿರಲಿಲ್ಲ. ಸ್ವಂತ ಖರ್ಚಿನಿಂದ ಮುದ್ರಣ ಮಾಡಿಸುವುದು ಹೊಟ್ಟೆಯೇ ಭಾರವೆನಿಸುವ ಹುಳುಗಳಿಗೆ ಸಾಧ್ಯವೆಲ್ಲಿ? 'ಶ್ರೀರಾಮ ಪಟ್ಟಾಭಿಷೇಕ'ವನ್ನು ಬರೆದವರು 'ಲಕ್ಷ್ಮೀಶ' ಯೆಂದರೆ, "ಶ್ರೀರಾಮಾಶ್ವಮೇಧ"ವನ್ನು ರಚಿಸಿದವರು 'ಮುದ್ದಣ' ಎಂದು ಮುಚ್ಚುಮರೆಯ ಹೆಸರಿನಿಂದ ಪ್ರಕಟಗೊಳಿಸುವ ಹಂಚಿಕೆ ಮಾಡಿದೆನು. ಹೊಸ ಕವಿತೆ–ಹೊಸ ಕಾಲದ ಕವಿ ಬರೆದುದೆಂದರೆ ಯಾರೂ ಮೂಸಿ ನೋಡುತ್ತಿರಲಿಲ್ಲ. ಆದುದರಿಂದ ಈ ವ್ಯವಹಾರೀ ಯುಕ್ತಿಯನ್ನುಪಯೋಗಿಸಿ ನನ್ನ ಗದ್ಯದ ಸವಿಯನ್ನು ಕನ್ನಡಿಗರಿಗೆ ಹಚ್ಚಿಕೊಟ್ಟಿದ್ದಾಯ್ತು.

ಹೊಟ್ಟೆಗೆ ಹಿಟ್ಟು ಹಾಕಿ ಸಲಹುವ ಶಕ್ತಿಯಿಲ್ಲದೆ ಮಕ್ಕಳನ್ನು ಮಾರಿಕೊಳ್ಳುವ ಬಡತಾಯಿಯರಿರುವಂತೆ, ಮುದ್ರಿಸಿ ಪ್ರಕಟಿಸುವ ಯಜಮಾನರು

ಸಿಗಲೊಲ್ಲರೆಂದು—ಸ್ವಂತ ಕೃತಿಗಳನ್ನು ಅನ್ಯರಿಗೊಪ್ಪಿಸಿದೆನು. ಆದರೇನು? ದೂರದಿಂದಲೇ ಮಕ್ಕಳ ಏಳಿಗೆಯನ್ನು ಕಂಡು ಆನಂದಿಸುವ ಭಾಗ್ಯವು ಆ ಬಡತಾಯಿಗಿರುವಂತೆ ನನಗೂ ನನ್ನ ಸ್ವಂತ ಕೃತಿಗಳ ಗುಣ-ರೂಪಗಳನ್ನು ಶ್ಲಾಘಿಸುವ ನುಡಿ ಕೇಳಿ ಆನಂದಿಸುವ ಭಾಗ್ಯ ದೊರಕಿತು. ನಾನು ಧನ್ಯನೇ ಸರಿ.

"ಕರ್ಮಣಿ ಸರದೊಳ್ ಜಿಂಬವಳಮಂ ಕೋದಂತೆ" ಸಂಸ್ಕೃತ ಶಬ್ದಗಳನ್ನು ಉಪಯೋಗಿಸುವ ರೀತಿಯು ಕನ್ನಡಿಗರಿಗೆ ಪ್ರಿಯವಾದುದಾಗಿದೆಯೆಂದು ಸಂತೋಷಿಸುತ್ತೇನೆ. ಆ ದಾರಿಯಲ್ಲಿ ಕನ್ನಡದ ಗದ್ಯ ಹೊನಲು ಪ್ರವಹಿಸಿ, ಈಹೊತ್ತು ಹಲವು ವಿಧದ ಪ್ರಯೋಗಕ್ಕೆ ಈಡಾಗಿ, ನೂತನ ಗದ್ಯ ನಿರ್ಮಾಣವಾಗುತ್ತಲಿದೆ. ಇದು ಶುಭಚಿಹ್ನವೇ ಸರಿ ಬಹುಜನರಿಗೆ ಆದರಣೀಯವಾದ ಕೃತಿಯಾಗಬೇಕಾದರೆ ಅದು ಗದ್ಯವಾಗಿರಬೇಕೆಂದೂ, ಕಥಾಸಂವಿಧಾನಚಾತುರ್ಯ, ಸುಂದರ ಶೈಲಿ ಇವುಗಳನ್ನು ಅಳವಡಿಸಿಕೊಳ್ಳಲಿಕ್ಕೆ ಗದ್ಯವೇ ಸಮರ್ಥವಾಗಿದೆಯೆಂದೂ, ಸರಳವಾದ ಸುಂದರ ಶೈಲಿಯೇ ಜನಮೆಚ್ಚಿಗೆಯ ಹೆದ್ದಾರಿಯೆಂದೂ ನಾನು ಈಗಲೂ ನಂಬಿಕೊಂಡಿರುವೆನು. ಚಮತ್ಕಾರವಾದ ಸಂಭಾಷಣೆ, ಕಥಾನಕದಲ್ಲಿ ಅಡಿಗಡಿಗೆ ಹಾಸ್ಯ ಸುಳಿದು ಹಿಗ್ಗುಗೊಳಿಸಬೇಕಾದರೆ ಗದ್ಯದಂಥ ಸೊಗಸಾದ ಕ್ಷೇತ್ರ ಸಿಗಲಾರದು. ಆದರೆ ಗದ್ಯವು ಹೃದ್ಯವಾದರೂ ಹೃದ್ಯವಾದ ಗದ್ಯದಲ್ಲಿ ಹೇಳದಿದ್ದರೆ ಆ ಕೃತಿಯು ಸಾರ್ಥಕವೆನಿಸಲಾರದು

"ಗೋದಾವರಿ" ಎಂಬ ಕಾದಂಬರಿಯನ್ನು ಒಂದು ಪ್ರಕರಣ ಮಾತ್ರ ಬರೆದಿಟ್ಟ ನಾನು—ಅದನ್ನು ಮುಗಿಸುವವರೆಗಾದರೂ ಬದುಕಿರಬೇಕಿತ್ತು ಎಂದು ಕೊರಗುವೆನಾದರೂ ಅದಕ್ಕೊಂದು ಕಾಲ ಬರಬೇಕಲ್ಲ ಎಂದು ಸಮಾಧಾನ ತಳೆದಿದ್ದೇನೆ.

ಇಂತು—ಕನ್ನಡಿಗರ ಮುದ್ದಿನ,

**ಮುದ್ದಣ್ಣ**

---

## ಶಾಂತಕವಿಗಳ ರಾಷ್ಟ್ರೀಯತೆ

ಕನ್ನಡ ರಾಜ್ಯಲಕ್ಷ್ಮಿ-ಭುವನೇಶ್ವರಿಯ ಅಕ್ಕರೆಯ ಮಕ್ಕಳೇ,

ನನ್ನ ಆದಿಕಾಲವು ಎಷ್ಟೇ ನಿರಾಶಾಮಯವಾಗಿದ್ದರೂ, ಅಂತ್ಯಕಾಲವು ಅಷ್ಟೇ ಆಶಾಜನಕವಾಗಿದ್ದುದರಿಂದ "ಮೆರವಣಿಗೆ ಮುಗಿಲಾಯ್ತು! ಸಾಹಸವು ಹಿರಿದಾಯ್ತು! ಧರೆಯೊಳುದಿಸಿದ ಕಾರ್ಯ ಸಫಲವಾಯ್ತು!! ಪರಮ ಕರ್ನಾಟಕದ ಕೀರ್ತಿ ವಿಸ್ತಾರವಾಯ್ತು, ಹರುಷ ನಿರ್ಭರವಾಯ್ತು ಶಾಂತೇಶಗೆ" ಎಂದು ಹಾಡುತ್ತ ನಾನು ದಿವಂಗತನಾದೆನು. ನಾನು ಹುಟ್ಟಿದ ಉದ್ದೇಶವು ಸಫಲವಾಗದಿದ್ದರೂ ಸುಪುಷ್ಟವಾಗಿದ್ದನ್ನು ಕಣ್ಣಾರೆ ಕಂಡೆನು. ಹಳ್ಳಿಗರು ಬಯಲಾಟ-ಲಾವಣಿಗಳಲ್ಲಿ ಮೈಮರೆತಿರುವಾಗ, ಪಟ್ಟಣಿಗರು ಶೃಂಗಾರಕ್ಕೆ ಪಟ್ಟಗಟ್ಟಿ ಬೀಭತ್ಸಕ್ಕೆ ಪ್ರಧಾನಿ ಪದವಿಗೇರಿಸಿದಾಗ, ರಸಗಳು ಕವಿ-ಕಾವ್ಯಗಳನ್ನು ಭೀತಿಯಿಂದ ಬಿಟ್ಟು ದಿಕ್ಕಾಪಾಲಾದಾಗ, ಧಾರವಾಡ, ಬೆಳಗಾವ, ಕಲಾದಗಿ ಮುಂತಾದ ಕನ್ನಡ ಜಿಲ್ಹಾ ಸ್ಥಳಗಳಲ್ಲಿ ಸಹ ಮರಾಠೀ ಪತ್ರಿಕೆಗಳು ಹೊರಡುತ್ತಿರುವ ತಿರುಗುಮುರುಗುಕುಣಿತ ನಡೆದಾಗ ಕರ್ನಾಟಕದಲ್ಲಿ ಜಿಣಿಮಿಣಿಗುಟ್ಟುವ ಹಿರಿಯರು ಶಿವಾಜಿ ಜಯಂತಿ, ಗಣೇಶೋತ್ಸವ, ಗೋರಕ್ಷಣ ಮೊದಲಾದ ಮಹಾರಾಷ್ಟ್ರದ ಚಳುವಳಿಗಳಿಗೆ ಆಸ್ಪದ ಕೊಟ್ಟು ಭಾಗ ವಹಿಸಿದಾಗ ನಾನೊಂದು ಹಳ್ಳಿಯ ಶಾಲೆಯ ಕನ್ನಡ ಶಿಕ್ಷಕನಾಗಿ ಅವನ್ನು ನಿಟ್ಟಿಸಿದರೆ ಎಲ್ಲವೂ ಅನುಕರಣವೇ ಆಗಿ ಕಾಣಿಸುತ್ತಿತ್ತು. ಕನ್ನಡತನವು ಹುಡಿಗೂಡಿ ರಸಾತಳಕ್ಕಿಳಿದಾಗ ಕನ್ನಡ ಭಾಷೆಯ ಅಭಿಮಾನವೂ ಅದೇ ಕಾಲಕ್ಕೆ ನೆಲೆಯೂರಿತೆಂಬುದನ್ನೂ ಮರೆಯಲಾಗದು. ಬಂಗಾಲದಿಂದ ಹೊರಟ ಸ್ವದೇಶೀ ಹಾಗೂ ವಂದೇ ಮಾತರಂ ಎಂಬ ಶಕ್ತಿಗಳೆರಡು ಕರ್ನಾಟಕದ ವರೆಗೂ ಪ್ರವಹಿಸಿ ಬಂದು ಸ್ವ-ದ ಜ್ಞಾನವನ್ನೂ ಮಾತೃಭೂಮಿಯ ಬಗ್ಗೆ ಭಕ್ತಿಭಾವವನ್ನೂ ಹುಟ್ಟಿಸಿದವು. ೧೮೫೭ನೆಯ ಇಸವಿಯು ಸಿಪಾಯಿಗಳಲ್ಲಿ ಬಂಡಾಯವೆಬ್ಬಿಸುವ ಗಡಸುತನವನ್ನೂರಿದರೆ

ಕರ್ನಾಟಕದಲ್ಲಿ ಶಾಂತಕವಿಯನ್ನು ಹುಟ್ಟಿಸಿತು. ಸ್ಮಶಾನಶಾಂತತೆಯನ್ನು
ಹೋಲುವ ಕರ್ನಾಟಕದಲ್ಲಿ ಶಾಂತಕವಿಯಾದ ನಾನು ೧೬ನೆಯ ವಯಸ್ಸಿಗೆ
೧೨ ರೂ. ಸಂಬಳದ ಶಿಕ್ಷಕನಾಗಿ ೪೦ ವರುಷ ದುಡಿದರೂ ೨೨ ರೂ.
ಗಳಿಗಿಂತ ಹೆಚ್ಚಿನ ಸಂಬಳದ ಮೋರೆ ಕಾಣದೆ ಹನ್ನೊಂದು ರೂಪಾಯಿಯ
ವಿಶ್ರಾಂತಿವೇತನ ಪಡೆದೆನು. ಈ ಸ್ಮಶಾನಶಾಂತಿಯ ಶಾಂತಜೀವನಕಾಲ
ದಲ್ಲಿ ಶ್ರೀ. ಕಿತ್ತೂರ ಶಾಂತಯ್ಯನವರು ನನಗೆ ಪೂಜ್ಯರಾಗಿದ್ದರೂ ಗುರು
ಗಳಂತೆ ನನ್ನ ಕವಿತೆಯೂ ಶಾಲೆಗೆ ಭೆಟ್ಟಿಕೊಡುವ ಮಾಮಲೇದಾರ, ಶಾಲಾ
ಇನ್ಸಪೇಕ್ಟರ ಇಂಥವರನ್ನು ಹೊಗಳುವ ಸ್ತೋತ್ರರಚನೆ ಮಾಡುವಾಗಲೇ
ಪ್ರಕಟಗೊಂಡಿತು. ನಾನು ಕುಗ್ರಾಮವಾಸಿಯಾಗಿದ್ದರಿಂದಲೇ ಮರಾಠಿಯ
ಮುದ್ರೆ ನನ್ನ ಮೇಲೆ ಬೀಳಲಿಲ್ಲ ಹಳ್ಳಿಗಳಲ್ಲಿ ಮರಾಠಿಯ ಪ್ರಾಬಲ್ಯ
ಕಡಿಮೆ. ಹಳ್ಳಿಗಳಲ್ಲಿ ಉಡಾಳರಾಡುವ ನಾಟಕ, ದೊಡ್ಡಾಟ, ಲಾವಣಿ
ಮೊದಲಾದವುಗಳೆಲ್ಲ ಕನ್ನಡದಲ್ಲಿಯೇ ಜರುಗುತ್ತಿದ್ದವು, ಅಂಥ ಹಳ್ಳಿಯ
ಸಮಗಾರ ಶಿಷ್ಯರಿಗೆ ನಾನು ಗುರು ಆಗಿ ನಾಟಕಗಳನ್ನು ರಚಿಸಿಕೊಟ್ಟಿದ್ದೂ,
ಲಾವಣಿ ಕಟ್ಟಿಕೊಟ್ಟಿದ್ದೂ, ರಿವಾಯತ ಪದಗಳನ್ನು ಬರಕೊಟ್ಟಿದ್ದೂ,
ಅನುಭವದ ಪದ ಮಾಡಿಕೊಟ್ಟಿದ್ದೂ, ಕೀರ್ತನೆ ಕಲ್ಪಿಸಿ ಹೇಳಿದ್ದೂ,
ಕನ್ನಡಸೇವೆ ಅಥವಾ ಪೂಜೆಯೇ ಆದಂತಾಯ್ತು. ನಾಟಕ, ಕೀರ್ತನ
ಮೊದಲಾದ ೬೫ ಗ್ರಂಥಗಳನ್ನು ನಾನು ರಚಿಸಿದರೂ, ಅದೆಲ್ಲ ಖಟಾ
ಟೋಪವು ಪಂಡಿತರನ್ನು ಕೆಣಕಿ ಅವರಲ್ಲಿ ಗ್ರಂಥರಚನೆಯ ಈರ್ಷೆ
ಯನ್ನು ಉತ್ಪನ್ನಮಾಡುವ ಮಂದವಿಚಾರದಿಂದಲೇ ಎಂಬ ಮಾತನ್ನು
ನಾನೇ ಆಗಲೇ ಬಿಚ್ಚಿಹೇಳಿದ್ದೇನೆ. ನನ್ನ ಕೆಲಸ, ಸಿಗುವ ವೇಳೆ, ದೊರೆವ
ಸಂಬಳ, ಇರುವ ಜ್ಞಾನ, ಲೇಖನ ಕಾಲ ಇವನ್ನೆಲ್ಲ ಮನದಂದರೆ ನನ್ನಿಂದ
ತೃಪ್ತಿಕರವಾದ ಕೆಲಸವಾಗುವುದೆಂತು? ಬರೆದ ನಾಟಕ ಆಡುವ ಮೇಳದವ
ರೆನ್ನುವುದಕ್ಕಿಂತ ಮೇಳದವರ ಸಲುವಾಗಿ ಬರೆದ ನಾಟಕವೆನ್ನುವುದಾದರೆ
ಒಪ್ಪುವದು. ನನ್ನ ಕೃತಿಗಳಲ್ಲಿ ಕಂಡುಬರುವ ದೋಷಗಳಿಗೆ ಇದೇ ಮೂಲ
ಕಾರಣವು. ಹೀಗಿದ್ದರೂ ನನ್ನನ್ನು ನಾಟಕದ ಆದ್ಯ ಗುರುಗಳೆಂದು ಬಗೆ
ಯುತ್ತಿರುವ ಕನ್ನಡಿಗರ ಔದಾರ್ಯ ಹೆಚ್ಚಿನದು.

ಇಂಥ ದೋಷಯುಕ್ತ ನಾಟಕಗಳನ್ನು ಬರೆಯುವ ಅವಶ್ಯಕತೆ

ಯೇನಿತ್ತು, ಎಂದು ಕೇಳಬಹುದು. "ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕ ಕೀರ್ತಿ; ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕದರ್ಥಿ, ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕ ನಟರ ಮೂರ್ತಿಗಳ ಸಂಚಾರವು. ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕದಾಟ, ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕ ಕೂಟ; ಎಲ್ಲಿ ನೋಡಲು ಮಹಾರಾಷ್ಟ್ರ ಭಾಷಾಮಯಂ ತಾನಾಯ್ತು ಕರ್ನಾಟಕಂ" ಈ ಬಗೆಯ ಪರಿಸ್ಥಿತಿಯಲ್ಲಿ ನನ್ನ ಔಡಲಗಿಡಕ್ಕೇ ಮರವೆಂದು ಮನ್ನಿಸಿ—"ಕರ್ನಾಟ ನಾಟ್ಯರಂಗದ ಭೂಮಿ ಬೀಳು ಬಿದ್ದಿತ್ತು. ನಾಟಕ ನಟನ ಕಲೆಯನ್ನು ಸುಸ್ಥಿರಂಗೊಳಿಸಿ ಕರ್ನಾಟ ರಂಗಸ್ಥಳದ ದುಸ್ಥಿತಿಯು ಕಳಿದೆ ನೀನಸಮ ಸಾಹಸಿ ಕಣಾ" ಎಂದು ಹಿರಿಯ ಭಾವನೆಯಿಂದ ಅಭಿನಂದಿಸಲ್ಪಟ್ಟಿನಲ್ಲವೇ? ಸಾರ್ವಜನಿಕ ಕಾಕಾ ಒಬ್ಬರು ಧಾರವಾಡದ ಆನಂದೋದ್ಭವ ನಾಟ್ಯಮಂದಿರದಲ್ಲಿ ಸಾರ್ವಜನಿಕ ಸಭೆ ಕೂಡಿಸಿ ನನಗೆ ಒಂದು ಗಡಿಯಾರ ಕೊಡಿಸಿದ್ದೂ, ಇನ್ನೊಬ್ಬರು ಸುಂದರವಾದ ಉಡುಗೊರೆ ಒಪ್ಪಿಸಿದ್ದೂ, ಕಲಾದಗಿ, ಬೆಳಗಾವಿ, ಧಾರವಾಡ ನಗರಗಳ ಮರಾಠಿ ಪತ್ರಿಕೆಗಳು ಸಹ ನನ್ನ ಕುರಿತು ಅತ್ಯಂತ ಗೌರವಪೂರ್ಣವಾದ ಲೇಖನಗಳನ್ನು ಪ್ರಕಟಿಸಿದ್ದೂ ಅದೇ ಕಾಲದಲ್ಲಿಯೇ ಅಲ್ಲವೇ? ಇಷ್ಟೆಲ್ಲ ಮನ್ನಣೆಗಳು ಕನ್ನಡ ಶಾಲೆಯ ಒಬ್ಬ ಉಪಶಿಕ್ಷಕಗೆಂದರೆ, ಅವನು ಜನ್ಮಾಂತರದಲ್ಲಿಯೂ ಆ ವಿಷಯವನ್ನು ಮರೆಯಲಾರನು. ಇಲ್ಲಿ ಇದೀಗ ಅದನ್ನೆಲ್ಲ ಹೇಳಿಕೊಳ್ಳುವುದು ತುಸು ಆತ್ಮಪೌರುಷವೆನಿಸಿದರೂ ಅದು ಹಳ್ಳಿಯ ಶಿಕ್ಷಕ-ಬಂಧುಗಳಿಗೆ ಪ್ರಚೋದಕವೆನಿಸದಿರಲಾರದೆಂದು ನನ್ನ ಭಾವನೆ. ನನ್ನ ಸ್ಮರಣಾರ್ಥವಾಗಿ "ಶಾಂತೇಶ ವಾಚನಾಲಯ"ವನ್ನು ಧಾರವಾಡದ ತರುಣರು ನಡೆಸಿದರೆಂಬ ಮಾತು ಸಾಮಾನ್ಯ ಗೌರವದ ಸಂಗತಿಯೇ?

ಇವೆಲ್ಲವುಗಳಿಗಿಂತ ಸ್ಥಾಯಿಯಾಗಬಹುದಾದ ಕನ್ನಡ ಸೇವೆಯೆಂದರೆ ರಾಷ್ಟ್ರೀಯತೆಯ ಪ್ರಚೋದನೆ. ಅಂಥ ಸಾಹಿತ್ಯವನ್ನು ವಿಪುಲವಾಗಿ ಒದಗಿಸಬೇಕೆಂದರೆ ನನಗೆ ಆಯುಷ್ಯವಿರಲಿಲ್ಲ. ಬರೆಯುವ ಹಂಬಲವನ್ನಿಟ್ಟುಕೊಂಡು ದೇಹ ಬಿಟ್ಟಿದ್ದರಿಂದ ಅದೊಂದು ವಾಸನೆ ಉಳಿಯುವುದು ಸ್ವಾಭಾವಿಕ. ನನ್ನ ರಾಷ್ಟ್ರೀಯತ್ವದ ವಿಚಾರಗಳೆಲ್ಲ ಬೀಜರೂಪದಲ್ಲಿ ವಿದ್ಯಾರಣ್ಯ

ಕೀರ್ತನದಲ್ಲಿ ಕಂಗೊಳಿಸುವವು. ರಾಷ್ಟ್ರವೆಂದರೆ ಜನಾಂಗ. ಅದು ಜನತೆಯು ಸೊತ್ತು. ಅದು ನಾಡಿಗನ ವಸ್ತು. ಪ್ರತಿ ಒಬ್ಬ ಕನ್ನಡಿಗನಿಗೆ ಹೇಳುತ್ತೇನೆ– "ಕರ್ನಾಟಕವು ನಿನ್ನ ವಸ್ತು!" ಆದ್ದರಿಂದಲೇ "ನಿನ್ನ ವಸ್ತುವಂ ನೋಡು! ನೋಡು! ಮಮತೆಯ ಮಾಡು! ಬಳಿ ಕಾಪಾಡು" ಆ ವಸ್ತುವು ಅಂಥ ಇಂಥದಲ್ಲ ಅದು "ಆತ್ಮಸ್ಫೂರ್ತಿಯ ತೇಜ, ಜ್ಞಾನದ ಬೀಜ, ಜೀವದ ರಾಜ" ಆಗಿದೆ. ಅದನ್ನು ಕಂಡವನಿಗೆ—"ಬರುವದು ಕಳೆಮೊಗದಲ್ಲಿ, ಧೃತಿ ಮನದಲ್ಲಿ, ಬಲ ಮೈಯಲ್ಲಿ! ಪುರುಷಾರ್ಥಂಗಳು ನಾಲ್ಕು ದೊರೆವವು ಸಾಕು, ಹೆಚ್ಚೇಂ ಬೇಕು?"

ಆ ವಸ್ತುವನ್ನು ಸಾಕ್ಷಾತ್ಕರಿಸಿಕೊಳ್ಳುವ ಬಗೆ ಹೇಗೆ? "ದರುಶನದಿಂದಲಿ ಪರಿಚಯುವಪ್ಪುದು; ಪರಿಚಯದಿಂ ಸಂಭಾಷಣವೂ, ಭಾಷಣದಿಂ ಸಹವಾಸವೂ, ಸಹವಾಸದಿಂದ ಸಖ್ಯವೂ ಉಂಟಾಗುವವು. ಆ ಸಖ್ಯದಿಂದಲೇ ಒಕ್ಕಟ್ಟೂ, ಒಕ್ಕಟ್ಟಿಂದೇ ಮಹಾಕೃತಿಯೂ ಒದಗಿ, ಮಹಾಕೃತಿಗಳಿಂದ ದೇಶಕ್ಕೆ ಸುಹಿತವುಂಟಾಗಿ ಸುಹಿತದಿ ಮಾನವನಮರತ್ವಂ" ಪಡೆಯುವನು. ರಾಷ್ಟ್ರೀಯತೆಯ ಧರ್ಮವು ಯುಗಧರ್ಮವಾಗಿದೆ; ಅದರ ಸಂರಕ್ಷಣೆಯಿಂದಲೆ ಸನಾತನ ಧರ್ಮವು ಬದುಕಿ ಉಳಿಯಬೇಕಾಗಿದೆ. ರಾಷ್ಟ್ರಧರ್ಮದಿಂದ ಅಮರತೆಯನ್ನು ಸಂಪಾದಿಸಿದ ಪುರುಷನೇ ಸನಾತನ ಧರ್ಮವನ್ನು ಕಾಪಾಡ ಬಲ್ಲನು; ಅಂಥವನನ್ನೇ ಸನಾತನ ಧರ್ಮವು ಪುರುಷೋತ್ತಮನನ್ನಾಗಿಸಿ ಜ್ಞಾನ, ಶಕ್ತಿ, ಸಂವಾದ, ಸುಸಿದ್ಧಿಗಳನ್ನು ದಾನವಾಗಿತ್ತು ಅತಿಮಾನವ ನನ್ನಾಗಿ ಮಾಡಿಬಿಡುವದು. ಈ ಬಗೆಯ ಪ್ರಯತ್ನಗಳು ಕನ್ನಡನಾಡಿನಲ್ಲಿ ಅನೇಕ ಸಾರೆ ಆಗಿವೆ; ಧರ್ಮಸ್ಥಾಪಕರು, ರಾಜ್ಯಸ್ಥಾಪಕರು, ಶರಣರು, ಧರ್ಮನಿರತರಾದ ರಾಜರು, ಅಷ್ಟೇ ಏಕೆ ಕವಿಗಳು, ಸಾಮಾನ್ಯ ಜನರು ಸಹ ಆ ಮಹಾ ಉದ್ದೇಶಸಾಧನೆಯ ಅಭ್ಯಾಸಗೊಂಡು ಮುಂದುವರಿದಿದ್ದಾರೆ.

ಸಮೃದ್ಧ ಜೀವನದಾಯಕವಾದ ಆ ವಸ್ತುವಿನ ಉಪಾಸನೆಯಿಂದ ಲೌಕಿಕ-ಪಾರಮಾರ್ಥಿಕಗಳೆರಡೂ ಸಾರ್ಥಕವಾಗುತ್ತವೆ. "ಒಂದು ಕಡೆಗೆ ಗಿರಿಗಳ್ ಝರಿಗಳ್ | ತೊರೆಗಳ್ ಕೆರೆಗಳ್ | ಅರಣ್ಯಗಳ್ ಗ | ಹ್ವರಗಳ್ ಗುಹೆಗಳ್ | ತರುವಲ್ಲರಿಗಳ್ | ಖಗಮೃಗಗಳ್ ವಾನರಗಳ್ ಕಣ್ಣಿಗೆ

ತೋರುವವು.” ಅದರಂತೆ “ಇನ್ನೊಂದೆಡೆಗೆ ಪುರಗಳ್ ಗುಡಿಗೋಪುರಗಳ್| ಪೂರ್ವದ ಅರಮನೆಗಳ್ ಶೂರರ ಮನೆಗಳ್ ನಾಗರಿಕರ ಮನೆಗಳ್ | ಗರುಡೀ ಮನೆಗಳ್ | ಕುರುಹಿನ ರೂಪದಿ ತೋರುವವು.” ಯೋಗದ ನೆಲೆ ಒತ್ತಟ್ಟಿಗೆ ತೊಳಗಿದರೆ ಭೋಗದ ಬೆಲೆ ಇನ್ನೊತ್ತಟ್ಟಿಗೆ ಬೆಳಗುವದು ಯೋಗದ ನೆಲೆಯನ್ನೂ ಭೋಗದ ಬೆಲೆಯನ್ನೂ ಬಿತ್ತರಿಸಲು, ರಾಷ್ಟ್ರವು ಸ್ವತಂತ್ರವೂ ಅಖಂಡವೂ ಆಗಿರಬೇಕಾಗುತ್ತದೆ. ಆ ಕೆಲಸಕ್ಕೆ ಬರಿಯ ಮುತ್ಸದ್ದಿತನವೊಂದಿದ್ದರೆ ಸಾಕಾಗದು; ಅದರಂತೆ ಒಂಟಿ ಅಧ್ಯಾತ್ಮಿಕತೆ ಯಿದ್ದರೂ ಕುಂಟುಬೀಳುವದು. ಆದಕಾರಣ ಅಪ್ರತಿಮ ತಾಪಸನೂ, ಅಪ್ರತಿಮ ಕರ್ಮಠನೂ, ಅಪ್ರತಿಮ ಭೂತದಯೆಯುಳ್ಳಾತನೂ, ಅಪ್ರತಿಮ ಪಂಡಿತನೂ, ಅಪ್ರತಿಮ ಚತುರನೂ ಆದ ಅಪ್ರತಿಮ ವೇದಾಂತ ಸಿದ್ಧಾಂತಿ ಬೇಕು; ಅವನು ವೈಭವೋತ್ಪಾದಕನೂ, ವೈಭವ ಸ್ಥಾಪಕನೂ, ವೈಭವದ ಚಾಲಕನೂ ಆಗಬಲ್ಲನು; ವೈಭವದೊಳಿದ್ದು ಪರ ವೈಭವವ ಸಾಧಿಸುವ ಪುಣ್ಯಾತ್ಮನಾಗಬಲ್ಲನು.

ಅಂಥ ಪುಣ್ಯಾತ್ಮರು ಯಾವಾಗ ಕಾಣಿಸಿಕೊಳ್ಳುವರು ಗೊತ್ತೇ? “ಇಳಿಯುತಿವೆ ಪಾತಾಳ ಖಾತಕೆ ಬೆಳೆದ ಭಾರತ ದೇಶವು; ಕಳಚುತಿವೆ ಧರ್ಮಾಲಯದ ಸೋಂಗಳಸ, ಕನ್ನಡಿ ಧ್ವಜಗಳು ಉದ್ಧರಿಸುವ ಮಹಾತ್ಮ ರಿಲ್ಲವೆ? ಇದ್ದರೇಕೆ ವಿಲಂಬವು?” ಎಂಬ ಗೋಳಿನ ಬೊಬ್ಬೆ ಪ್ರಜಾಮುಖ ದಿಂದ ಮುಗಿಲು ಮುಟ್ಟಿದಾಗ, ಪರಮಾತ್ಮನ ಪಾಂಚಜನ್ಯವು ಉತ್ತರ ರೂಪವಾಗಿ ಮೊಳಗುವದು. ಆಗ ಹುಲ್ಲು ಮಾನವರೆಲ್ಲ ಜೀವಕಳೆಯಿಂದ ತುಂಬಿದವರಾಗಿ ತೊಡರು-ತೊಂದರೆಗಳನ್ನು ಪ್ರತಿರೋಧಿಸಲನುವಾಗುವರು. ಸ್ವತಂತ್ರತೆ ಮೊದಲು ಬೇಕು. ಲಕ್ಷ ಶಾಸ್ತ್ರಗಳೇತಕೆ, ಲಕ್ಷ ಸೂತ್ರಗಳೇ ತಕೆ? ಮೋಕ್ಷ ಸಂಪಾದನೆಗೆ ಶಾಸ್ತ್ರ-ಸೂತ್ರಗಳಿಂದ ಸ್ವತಂತ್ರತೆಯೇ ನಿಶ್ಚಯ ವಾಗಿಯೂ ಮೋಕ್ಷಕಾರಕವಾಗಿದೆ. ಪಾರತಂತ್ರ್ಯವು ಮೋಕ್ಷಸುಖಕೆ ಅಪ ಕಾರಿಯಾಗಿರುವುದಲ್ಲದೆ ಅದು ಅಧೋಗತಿಯೂ ಅಹುದು. ಪಾರತಂತ್ರ್ಯ ಸ್ಥಿತಿಯ ಮೂಲವನ್ನು ಸಂಹರಿಸುವದೇ ಸುತಪಃ ಕೃತಿಯಾಗಿದೆ. ಸತ್ವದ ಅರ್ಥವನ್ನು ತಿಳಿಯದಿದ್ದರೆ ತತ್ವದರ್ಥಗಳ ಉಪಯೋಗವೇನು? ತತ್ವ

ಮಥನ ಮಾಡುವುದಕ್ಕಿಂತ ಮೊದಲು ಸ್ವತ್ವವನ್ನು ಲೋಕಕ್ಕೆ ತಿಳಿಸಿಕೊಡು ವುದರ ಆವಶ್ಯಕತೆಯಿದೆ. ಸ್ವತ್ವವನ್ನು ಪ್ರೀತಿಸಲಾರದವನಿಗೆ, ತತ್ವದರ್ಶ ನವು ವ್ಯರ್ಥವೇ ಸರಿ. ಸ್ವತ್ವವನ್ನು ತಿಳಿದರೆ ಸಾಕಾಗದು; ತಿಳಿಸಿದರೆ ಸಾಕಾಗದು; ಅದನ್ನು ಪ್ರೀತಿಸಿದರೂ ಸಾಕಾಗದು; ಸ್ವತ್ವವನ್ನು ಆಚರಿಸ ಬೇಕಾಗುವದು; ಅದಿಲ್ಲದಿದ್ದರೆ ಜೀವನವೇ ನಿಸ್ಸತ್ವವೆನಿಸುವದು. ಯಾವ ಒಳ್ಳೆಯ ಕೆಲಸಕ್ಕಾದರೂ ಕಾಲವು ಅನುಕೂಲಿಸಿರಬೇಕು. ಪ್ರತಿಕೂಲವಾದ ಕಾಲವೇ ಹಾಲಾಹಲವೆಂದೂ, ನಮಗನುಕೂಲವಾದ ಕಾಲವು ಪೀಯೂಷ ವೆಂದೂ ಹೇಳಬಹುದು. ಅಂಥ ಕಾಲವು ಎಲ್ಲಿದೆ, ಯಾವಾಗ ಬರುವ್ವದು, ಅದರ ಲಕ್ಷಣವೇನು ಎಂದು ಶೋಧಿಸುತ್ತ ಕುಳಿತುಕೊಳ್ಳಬಹುದೇ? ಕೋಟ್ಯವಧಿ ಕ್ಷಣಗಳು ಕೂಡಿಯೇ ಒಂದು ಕಾಲಚಕ್ರವಾಗಿದೆ; ಯಾವ ಕ್ಷಣವನ್ನೂ ವ್ಯರ್ಥ ಹೋಗಗೊಡದೆ ಅದನ್ನು ಸಾಧಿಸಿಕೊಂಡಿದ್ದಾದರೆ ಅದು ನಮಗೆ ಘನಸುಖವನ್ನಿತ್ತು ಸಾಗುವದು.

ಕಾಲವೊಂದು ನಮ್ಮ ಹತ್ತಿರವಿದ್ದರೇನಾಯಿತು? ಇನ್ನೇನೂ ಸಿದ್ಧತೆ ಬೇಡವೇ? ನಾವು ಸತ್ತಿದ್ದರೂ ಸತ್ತಂತಿದ್ದರೂ ಭೂಮಿತಾಯಿ ನಮ್ಮನ್ನು ಎತ್ತಿ ಹಿಡಿದಿಲ್ಲವೇ? ನಮ್ಮದೇ ಆದ ಮಾತು ಇಲ್ಲವೇ? ಆ ಮಾತು ಬಳಸಿ ನಮ್ಮನಮ್ಮೊಳಗಿನ ಸುಖದುಃಖಗಳನ್ನು ಪರಸ್ಪರರು ಅರಿತುಕೊಳ್ಳಬಹು ದಲ್ಲವೇ? ಸ್ವಭೂಮಿ, ಸ್ವಭಾಷೆ, ಸ್ವಾಭಿಮಾನ ಚೇತನಗಳಿರುವಂತೆ, ಸ್ವಧರ್ಮವೂ, ಸ್ವದೇಶಬಾಂಧವರೂ, ಸ್ವದೇಶವೂ ನಮಗಿಲ್ಲವೇ? ಇನ್ನೂ ಏನು ಬೇಕು—ಸಹಾಯುಸಿದ್ಧತೆ? ಇಷ್ಟೆಲ್ಲಕ್ಕೂ ಮಿಗಿಲಾಗಿ ಕನ್ನಡಿಗರೇ, ನಮ್ಮ ಮೇಲೆ "ಪರಮಭುವನೇಶ್ವರಿಯ ಕರುಣಾರ್ದ್ರದೃಷ್ಟಿ" ಬೇರೆ ಇರುವದೆಂಬದನ್ನು ಮರೆಯಬೇಡಿರಿ ಇವಿಷ್ಟು ಒಂದುಗೂಡಿದರೆ ಅಲ್ಲಿಯೇ "ಅದ್ಭುತ ಮಹಾಶಕ್ತಿ! ಅದ್ಭುತ ವಿರಕ್ತಿ!! ಅದ್ಭುತ ತಪಸ್ಸಿದ್ಧಿ! ಅದ್ಭುತ ಸಮೃದ್ಧಿ!!" ಇವು ಕಂಗೊಳಿಸುವವು.

ಕನ್ನಡ ಬಂಧುಗಳೇ, ಕನ್ನಡ ಸಾಲೆಯ ಮಾಸ್ತರನಿಗೆ ಎಲ್ಲಿಂದ ಬಂತು—ರಾಷ್ಟ್ರೀಯತ್ವ? ಎಂದು ಅನ್ಯ ಮನಸ್ಕರಾಗಬೇಡಿರಿ. ಭಾರತ

ವನ್ನು ಎಚ್ಚರಿಸಿದ್ದೇ ರಾಷ್ಟ್ರೀಯತ್ವ. ಪಡುವಣನಾಡಿನಿಂದ ಬಂದ ಕೈಗಡ ಬದುಕಾಗಿದ್ದರೂ ಅದರ ಪ್ರಯೋಜನವು ನಮ್ಮ ನಾಡಿಗೆ ಅಷ್ಟಿಷ್ಟಾಯ್ತೆಂದು ಹೇಳಲಿಕ್ಕೆ ಬರುವದಿಲ್ಲ ರಾಷ್ಟ್ರೀಯತ್ವವು ಎಚ್ಚರಿಸುವ ಕೆಲಸ ಮಾಡುವುದಕ್ಕಾಗಿಯೇ ಬಂದದ್ದು. ಎಚ್ಚರಾದವರಿಗೆ ಅದರ ಪ್ರಯೋಜನವಿರಲಿಕ್ಕಿಲ್ಲವಾದರೂ ಎಚ್ಚರಿಯಬೇಕಾದವರಿಗೆ ಅದರ ಪ್ರಯೋಜನವಿದ್ದೇ ಇದೆ, ಪ್ರಯೋಜನವಿಲ್ಲೆಂದರೆ, ಎಚ್ಚರಗೊಳಿಸಿದವರಿಗೆ ಕೃತಜ್ಞತೆಯಾದರೂ ಬೇಡವೇ ?

ಇತಿ—ಕನ್ನಡಿಗರಿಗೆ ಕೃತಜ್ಞನಾದ,

**ಶಾಂತಕವಿ**

---

# ೧೪

# ಅಲ್ಲಮಪ್ರಭುವಿನ ಅದ್ವೈತ

ಗುಹೇಶ್ವರಲಿಂಗಸ್ವರೂಪರಾದ ಕನ್ನಡಿಗರೇ,

ಸಂಸಾರಸಂಗಾತಿಯಾದ ಕಾಮಲತೆಯನ್ನು ಕಳಕೊಂಡು ವೈರಾಗ್ಯ ಪರವಶನಾಗಿ ಅನಿಮಿಷ್ಯಯ್ಯನೆಂಬ ಶಿವಯೋಗಿಯ ಕೃಪಾಕಟಾಕ್ಷದಿಂದ ಇಷ್ಟಲಿಂಗವನ್ನು ಪಡಕೊಳ್ಳುವುದೇ ತಡ, ನನಗೆ ಶಿವತತ್ವವೆಲ್ಲ ಕರತಲಾ ಮಲಕವಾಯಿತು. ಕಾಮಲತೆಯ ಅಗಲಿಕೆಯು ನನ್ನ ಸಂಸಾರದ ಬಾಹ್ಯ ಬಂಧನವನ್ನು ತೆಗೆದೊಗೆದಂತೆ,ಆಕೆಯ ವಿರಹದುಃಖವು ಹೃದಯದ ಆವರಣ ವನ್ನು ಹರಿದುಹಾಕಿತು. ಅಷ್ಟರಲ್ಲಿ ಶಿವನನ್ನು ನೋಡುವ ಕಣ್ಣು ಕೊಟ್ಟಂತೆ, ಅನಿಮಿಷಯ್ಯನು ಇಷ್ಟಲಿಂಗವನ್ನು ಕೈಗಿತ್ತನು. "ಶಿವನ ನೋಳ್ಪಂತೆ ಎಲ್ಲಮಂ ನೋಳ್ಪ—ಲ್ಲಮ"ನಾದೆನು; "ಭವನೊಳಗಿರುತ್ತೆಲ್ಲರೊಳಗಿರ್ಪ" ಅಲ್ಲಮನಾದೆನು. ಗುಹೇಶ್ವರ ಜ್ಯೋತಿರ್ಲಿಂಗವು ಶತಕೋಟಿ ಸೂರ್ಯರು ಮೂಡಿದಂತೆ ಎನ್ನೊಳಕಣ್ಣಿಗೆ ಕಂಗೊಳಿಸಿತು. ದೇವನು ಪ್ರಭೆಯು ಬೆಳಗಾ ದರೆ— ಜೀವನು ಕೇವಲ ಜ್ಯೋತಿಯೆಂದು ಎನ್ನ ಮನಕ್ಕೆ ನಿಜವ ತಿಳಿಸಿದೆನು. ಹೀಗೆ ದೇವ-ಜೀವರು ಪ್ರಭೆ-ಜ್ಯೋತಿಗಳಾಗಿ ಕೂಡಿದರೆ ಅದೇ ಅದ್ವೈತ ವಲ್ಲವೇ ?

ಅದ್ವೈತಸಾಧಕನ ಲಿಂಗಪೂಜೆಯ ವಿಧಾನವೇ ಬೇರೆ. ಹೇಗೆಂದರೆ— ಪ್ರಾಣಲಿಂಗಕ್ಕೆ ಕಾಯವೇ ಸೆಜ್ಜೆ, ಆಕಾಶಗಂಗೆಯಲ್ಲಿ ಮಜ್ಜನ, ಹೂವಿಲ್ಲದ ಪರಿಮಳದ ಪೂಜೆ, ಹೃದಯಕಮಲದಲ್ಲಿ ಶಿವಶಿವ ಎಂಬ ಶಬ್ದ, ಈ ಸಾಧನೆ ಯಿಂದ ಸಾಧಕನಿಗೆ ಜೀವನ್ಮುಕ್ತಸ್ಥಿತಿಯು ಪ್ರಾಪ್ತವಾಗುವದರಿಂದ ಅವನು ಸ್ತುತಿ-ನಿಂದೆಗಳಿಗೆ ನೊಂದುಕೊಳ್ಳಲಾರನು; ಅಹಂಕಾರದ ಕವಚದಲ್ಲಿ ಮಡುಗಲಾರನು; ಪುಣ್ಯಪಾಪಗಳನ್ನು ದಾಟುವನು; ಬಂದುದನುಂಬನು. ಅವನಿಗೆ ಯಮನ ಹಂಗಿಲ್ಲ; ಮಾನವರ ಹಂಗಿಲ್ಲ; ದೈವದ ಹಂಗಿಲ್ಲ; ಸತ್ಯ ಜ್ಞಾನಾನಂದವೇ ತಾನಾಗಿರುವದರಿಂದ ಇನ್ನಾರ ಹಂಗೂ ಇಲ್ಲ. ಇನ್ನಾರ

ಹಂಗೂ ಇಲ್ಲದಾತನು ಯಾರು? ಅವನು ಒಬ್ಬನೇ ಒಬ್ಬ ಗುಹೇಶ್ವರ ನಲ್ಲಯ್ಯ. ಹೀಗೆ ಅಲ್ಲಮನು ಗುಹೇಶ್ವರನಲ್ಲಯ್ಯಸ್ವರೂಪನಾದನೆಂದು ಹೇಳುವುದನ್ನು ಕೇಳಿ, ಇದೇನು ಇಂದ್ರಜಾಲವೇ ಮಾತಿನ ಮಲುವೇ ಎಂದು ಸಂಶಯಗೊಳ್ಳುವುದು ಸಹಜ. ಯಾಕೆಂದರೆ ಅಷ್ಟವಿಧಾರ್ಚನೆಯನ್ನೂ, ತ್ರಿಕಾಲಪೂಜೆಯನ್ನೂ ಕೈಕೊಂಡು ಅರ್ಧ ಆಯುಷ್ಯ ಕಳೆದರೂ ಯಾವ ಸಿದ್ಧಿಯನ್ನೂ ಅವರು ಕಂಡಿರುವದಿಲ್ಲ. ಅವರಿಗಿದೊಂದು ಮಾತು ಸಾಕು.– "ಮಣಿಯ ನೆಣಿಸಿ ದಿನವ ಕಳೆಯಲು ಬೇಡ. ಕಣಿಯ ಪೂಜಿಸಿ ದಿನವ ಕಳೆಯಲು ಬೇಡ. ಕ್ಷಣವಾದರೂ ನಿಜದ ನೆನಹೇ ಸಾಕು. ಕ್ಷಣದೊಳಗಣ ಅರ್ಧವಾದರೂ ನಿಜದ ನೆನಹೇ ಸಾಕು. ಬೆಂಕಿಯೊಳಗುಳ್ಳ ಬಿಸಿ ನೀರೊಳ ಗುಂಟೇ?"

ಕಲ್ಲಿನ ಮುಂದೆ ಕುಳಿತು ತಲೆಯೊಳ್ಳುವುದಕ್ಕಿಂತ, ನಿಜದ ನೆನಹಿನಿಂದ ದೇವತ್ವವನ್ನು ಪ್ರಕಟಗೊಳಿಸಿಕೊಳ್ಳುವುದು ಯುಕ್ತಿ ಸಿದ್ಧವಾಗಿಲ್ಲವೇ? ಮೂರ್ತಿಗೆ ನೀರೆರೆದು, ಹಸಿದಾಗ ಒಂದು ತುತ್ತು ಓಗರವನಿಕ್ಕುವ ಜೀವನು ದೇವರಲ್ಲವೇ? 'ನಾ ದೇವ ಕಾಣಾ' ಎಂದು ಜೀವನು ಗಟ್ಟಿಸಿ ಹೇಳಬೇಕಾಗುತ್ತದೆ. "ನೀನೇ ಕಲ್ಲಾದರೆ ನಾನೇನಾಗಬೇಕು?" ಎಂದು ಸಮಸ್ಯೆಯೊಡ್ಡುತ್ತಾನೆ. ಯಾಕೆಂದರೆ ದೇಹದೊಳಗೆ ದೇವಾಲಯವಿದ್ದು ಮತ್ತೆ ಬೇರೆ ದೇವಾಲಯವೇಕೆ?

"ಲಿಂಗವುಳ್ಳವರನ್ನೆಲ್ಲ ಸಂಗಮನಾಥನೆಂಬೆ" ಎನ್ನುವ ಮನೋಭಾವವು ನನಗೆ ಮಾನ್ಯವಿಲ್ಲ. 'ಲಿಂಗವುಳ್ಳವರೆಲ್ಲ ಸಂಗಮನಾಥರಲ್ಲ; ಲಿಂಗಗುಣಗಳಿದ್ದವರು ಮಾತ್ರ ಸಂಗಮನಾಥರು' ಎಂಬುದು ನನಗೆ ಒಪ್ಪಿತ. ಲಿಂಗೈಕ್ಯ ಶರಣರ ಕಂಡರೆ ನಂಬಿ ನಚ್ಚಿ ಅವರ ಪಾದಕ್ಕೆರಗುವುದೆನ್ನ ಮನವು. ಲಿಂಗವುಳ್ಳವರೆಲ್ಲ ಲಿಂಗಾಯತರೇ ಅಲ್ಲದಿರುವಾಗ ಅವರು ಸಂಗಮನಾಥರು ಹೇಗೆ ಆಗಬಲ್ಲರು? ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟದೊಡೇನು? ಹಸಿವು ಹೋಹುದೇ? ಇಟ್ಟಕಲ್ಲು ಮೆಳೆಯ ಮೇಲೆ ಸಿಕ್ಕಿದಡೆ ಆ ಕಲ್ಲು ಲಿಂಗವೇ? ಆ ಮೆಳೆ ಭಕ್ತನೇ? ಹೀಗೆ ಸ್ಪಷ್ಟೋಕ್ತಿಯಿಂದ ನಿಷ್ಠುರವಾಗಿ ನುಡಿಯುವೆನೆಂದು ಮುನಿಯಬೇಡಿರಿ.

ನೀವೆಮ್ಮ ವಂಶೀಭೂತರಾದ ಕಾರಣ ನಿಮ್ಮ ಹೆಚ್ಚು-ಕುಂದು ಎನ್ನವು; ನಿಮ್ಮ ಹಾನಿವೃದ್ಧಿ ಎನ್ನವು. ಬಯ್ದು ಹೇಳಿದವರು ಬುದ್ಧಿ ಹೇಳುವರಲ್ಲವೇ? ನಿಮ್ಮವನು ನಾನು, ನನ್ನವರು ನೀವು, ಆದುದರಿಂದ ಖಂಡಿತವಾಗಿ ಹೇಳುತ್ತಿದ್ದೇನೆ.

ಲಿಂಗಗುಣಗಳಿದ್ದವರು ಸಂಗಮನಾಥರೆಂದು ಹೇಳಿದಂತೆ, ಜಂಗಮರೆಂದು ಎಂಥವರಿಗೆ ಹೇಳಬೇಕು? "ಹೊನ್ನು ಹೆಣ್ಣು ಮಣ್ಣಿನಾಶೆಯು ಬಿಟ್ಟು, ಕೋಪತಾಪವಂ ಬಿಟ್ಟು, ಭ್ರಾಂತಿಭ್ರಮೆಯುಂ ಬಿಟ್ಟು ಜಂಗಮವಾಗಬೇಕು ಕಾಣಿರೋ! ಇಂತೀ ಷಡುಲೋಭದ ರುಚಿಯ ಹಿಂಗಿ ಜಂಗಮವಾದಲ್ಲದೆ ಭವ ಹಿಂಗದು." ಇದಕ್ಕೊಂದು ದೃಷ್ಟಾಂತವೇ ಬೇಕಿದ್ದರೆ ಕೇಳಿರಿ. ಅದೇನಂದರೆ--"ವ್ಯಾಧನು ಸೂಸಲ ಚೆಲ್ಲಿ, ಜಂತ್ರವ ಹಣ್ಣಿ, ಅಡಿಗಲ್ಲನೊಡ್ಡಿ ಹೋದ ಬಳಿಕ ಸೂಸಲ ಕಂಪಿಂಗೆ ಹೆಗ್ಗಣ ಬಂದು ಬಿದ್ದಂತೆ ಬಿದ್ದಿರಲ್ಲಾ ಮಾಯದ ಬಲೆಯಲ್ಲಿ! ಕೋಪವೆಂಬ ರಾಡನೊಡ್ಡಿ, ತಾಪವೆಂಬ ಅಡಿಗಲ್ಲನಿರಿಸಿ, ಹುಸಿಯೆಂಬ ಮಿಾಟುಗಣೆಯ ಜಂತ್ರಿಸಿ, ಹೊನ್ನು ಹೆಣ್ಣು ಮಣ್ಣೆಂಬ ಸೂಸಲ ಚೆಲ್ಲಿ ಕೆಡಹಿದನಲ್ಲಾ ನಿಃಕರುಣಿ ಮುಕ್ಕಣ್ಣ ವ್ಯಾಧನು."

ಜಂಗಮ ವೇಷ ಹಾಕುವುದು ಸುಲಭ; ಅಚ್ಚ ಜಂಗಮನಂತೆ ನಟಿಸುವುದೂ ಸಾಧ್ಯ. ಆದರೆ ಜಂಗಮನೇ ಆಗುವುದು ಬಿಗಿ. "ಘನತರ ಚಿಪ್ರದ ರೂಹ ಬರೆಯಬಹುದಲ್ಲದೆ ಪ್ರಾಣವ ಬರೆಯಬಹುದೇ ಅಯ್ಯ?" ರೂಹಿಗೆ ಪ್ರಾಣಪ್ರತಿಷ್ಠೆಯಾಗುವುದು ಅವಶ್ಯವಾಗಿರುವಂತೆ, ಜಂಗಮ ವೇಷಕ್ಕೆ—ಜಂಗಮ ನಟನೆಗೆ ಭಕ್ತಿಯೊಂದು ಅನಿವಾರ್ಯ. "ಆಚಾರವರಿಯದೆ, ವಿಭವವಳಿಯದೆ, ಕೋಪ ಮುರಿಯದೆ, ತಾಪವುಡುಗದೆ ಬರಿದೆ ಭಕ್ತರಾದೆ"ವೆನ್ನುವರು. ಆದ್ದರಿಂದ ಭಕ್ತನೆನಿಸುವವನು ಆಚಾರವನ್ನು ಅರಿತಿರಬೇಕು; ವಿಭವವನ್ನು ಅಳಿದಿರಬೇಕು; ಕೋಪವನ್ನು ಮುರಿದಿರಬೇಕು; ತಾಪವುಡುಗಿರಬೇಕು. ಇಷ್ಟೇ ಅಲ್ಲ; ಅರಿತಿದ್ದರೂ ಅರಿಯದಂತಿರಬೇಕು, "ಅರಿಯಬಾರದ ಘನವನು ಅರಿದವರು ಅರಿಯದಂತಿರ್ಪರು."

ತಾವೇ ಲಿಂಗಾಂಗವರಿಯದೆ ಲಿಂಗವೆಂದು ಮುಂದಿಟ್ಟುಕೊಂಡ ಮೂರ್ತಿಯನ್ನು ಪೂಜಿಸಿ ಪ್ರಯೋಜನವೇನು? ಭಾವದಲ್ಲಿ ಒಬ್ಬ ದೇವರು,

ಮನದಲ್ಲಿ ಒಂದು ಭಕ್ತಿ ಮಾಡಿದರೆ ಎತ್ತನೇರಿ ಎತ್ತನರಸುವವನಂತೆ ಎತ್ತ ಹೋಗುವನೋ ತಿಳಿಯದು. ತಾನು ಲಿಂಗವೆಂದರಿಯದೆ, ಗುಡಿ, ದೇಗುಲ, ಮಠ ಮೊದಲಾದ ಕಡೆಗೆ ಲಿಂಗವನ್ನು ಅರಸುವುದೆಂದರೆ ಅಸಾಧ್ಯಪರಂಪರೆಗೆ ಕೈಹಾಕಿದಂತೆಯೇ ಸರಿ. ಅಂಥವರಿಗೆ "ಬೆಟ್ಟಕ್ಕೆ ಚಳಿಯಾದಡೆ ಏನು ಹೊದ್ದಿಸುವಿರಯ್ಯ ? ಬಯಲು ಬತ್ತಲೆ ನಿಂದಡೆ ಏನು ಉಡಿಸುವಿರಯ್ಯ ?" ಎಂದು ಕೇಳುತ್ತೇನೆ.

ಒಟ್ಟಾರೆ ಜೀವನಿಗೆ ದೇವನೇ ಬೇಕಾದ ವಸ್ತುವಾಗಲುಬೇಕು. ಬೇಕಾದ ವಸ್ತು ದೇವನೇ ಆದ ಬಳಿಕ ಅವನನ್ನು ಒಳಗೆ ಅರಸಬಹುದು; ಅಥವಾ ಹೊರಗೆ ಅರಸಬಹುದು. ಲೌಕಿಕ ವಸ್ತುಗಳನ್ನು ಆಶಿಸಿ ಸರ್ವಸ್ವವನ್ನು ಕಳಕೊಂಡಾದರೂ ಅದನ್ನು ಪ್ರಾಪ್ತಿಸುವ ಪ್ರಯತ್ನಪಟ್ಟವರುಂಟು; ಸುಖದ ನೆರಳನ್ನು ಬೆಂಬಡಿದು ಗುಣ-ಹಣ ಕಳಕೊಂಡವರುಂಟು –"ಆಸೆಗೆ ಸತ್ತುದು ಕೋಟಿ; ಆಮಿಷಕ್ಕೆ ಸತ್ತುದು ಕೋಟಿ. ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ; ಗುಹೇಶ್ವರಾ, ನಿನಗಾಗಿ ಸತ್ತವರನಾರನೂ ಕಾಣೆ." ಗುಹೇಶ್ವರನಿಗಾಗಿ ಸಾಯುವುದೆಂದರೆ, ವಿದ್ಯೆ, ಬುದ್ಧಿ, ಸಂಪತ್ತು, ಕೀರ್ತಿ, ಮಾನ ಮೊದಲಾದವುಗಳನ್ನೆಲ್ಲ ಸೂರೆಮಾಡಿ, ಪ್ರಾಣಕ್ಕಿಂತ ಪ್ರಾಣವೆಂಬಂತೆ ಉಳಿಸಿಕೊಂಡು ಬಂದ ವಸ್ತುಗಳನ್ನೆಲ್ಲ ಬೆಲೆಗೊಟ್ಟು, ಪರಮಾತ್ಮನನ್ನು ಪಡೆಯುವುದು ಸರ್ವ ಸಮರ್ಪಣವೇ ಇದರರ್ಥ. ತನ್ನನ್ನು ತಾನು ಸಂಪೂರ್ಣವಾಗಿ ಕೊಡಬಲ್ಲವನಿಗೆ ದೇವದೇವನು ತನ್ನನ್ನು ತಾನು ಸಂಪೂರ್ಣವಾಗಿ ನೀಡಬಲ್ಲನು.

ದೇವಜೀವರ ಐಕ್ಯ, ಪ್ರಕೃತಿಪುರುಷರ ಒಂದಿಕೆ, ಜ್ಞಾನ-ಕರ್ಮಗಳ ಮಿಲನ, ಲೌಕಿಕ-ಪಾರಮಾರ್ಥಿಕಗಳ ಸಂಗಮ ಇವೆಲ್ಲವೂ ನನ್ನ ಅದ್ವೈತ ರಾಜ್ಯದೊಳಗಿನವೇ! ಒಂದು ಇದು ನನಗೊಪ್ಪಿತವಾದ ಮಂತ್ರ. 'ಹೊಟ್ಟೆಗಾಗಿ ಉಣ್ಣುವವರುಂಟು, ನೆತ್ತಿಗಾಗಿ ಉಣ್ಣುವವರು ಕಡಿಮೆ' ಎಂದು ನಾನೇ ಉಸುರಿದ್ದು ನಿಮಗೆ ಗೊತ್ತಿರಬಹುದು. ಹೊಟ್ಟೆಯ ಉಣಿಸಿನಿಂದ ಮೈ ಸ್ವಾಸ್ಥ್ಯಗೊಳ್ಳಲಿಯೆಂದೂ, ನೆತ್ತಿಯ ಉಣಿಸಿನಿಂದ ಬುದ್ಧಿಯು ಮಾಗಲಿಯೆಂದೂ ನನ್ನ ಮಾತಿನರ್ಥ. ಅವೆರಡೂ ಸಮತೂಕದ ಬಲವನ್ನು

ಸಂಪಾದಿಸಿದರೆ ಅಲ್ಲೊಂದು ಅಲೌಕಿಕವಾದ ವ್ಯಕ್ತಿತ್ವವು ಮೈದೋರುವ ದೆಂದು ನನ್ನ ಎಣಿಕೆ. ಆದರಂತೆ ಎರಡು ಕಣ್ಣಿನಿಂದ ಒಂದನ್ನೇ ದೃಷ್ಟಿಸುವ ಉದಾಹರಣೆಯನ್ನು ಕೊಟ್ಟು, ಸತಿಪತಿಗಳು ತೋರಿಕೆಗೆ ಎರಡಾದರೂ ನಿಲುಮೆಯಿಂದ ಅವರು ಏಕಜೀವರಾಗಬೇಕಾಗಿದೆಯೆಂದು ನನ್ನ ಲೆಕ್ಕಾಚಾರ. ಈ ಬಗೆಯಾಗಿ ಜೀವನದಲ್ಲಿ, ಸಂಸಾರದಲ್ಲಿ, ಕುಟುಂಬದಲ್ಲಿ, ಸಮಾಜದಲ್ಲಿ ಎಲ್ಲೆಲ್ಲಿಯೂ ಐಕ್ಯದ—ಅದ್ವೈತಸಿದ್ಧಿಯು ಕಂಗೊಳಿಸಲೆಂದು ಹಾರಯಿಸುವವ ನಾನಾಗಿರುವೆ. ಕನ್ನಡಿಗರ, ಕನ್ನಡನಾಡಿನ, ಕನ್ನಡ ಭಾಷೆಯ ಏಕೀಕರಣವು ನನಗೆ ಅನ್ಯ ವಿಷಯವೆನಿಸಲಾರದು. ಅದು ನನ್ನ ಜೀವಜೀವಾಳದ ವಿಷಯವೇ ಸರಿ.

ಇನ್ನು, ಮಾತೆ ಜ್ಯೋತಿರ್ಲಿಂಗವೆನ್ನುವ ಬಗೆಗೆ ತುಸು ಹೇಳಬೇಕೆಂದಿರುವೆ. ವಿಶ್ವದ ವಾತಾವರಣದಲ್ಲಿ ಮಾತಿನ ಕೋಲಾಹಲವು ದುಮುದುಮಿಸುತ್ತಲಿದೆ. ಅನವಶ್ಯಕವಾದ ಮಾತುಗಳಲ್ಲಿ ಶಕ್ತಿ ಕಡಿಮೆ, ಬೆಳಕು ಕಡಿಮೆ; ಪರಿಣಾಮವೂ ಕಡಿಮೆಯೇ. ಒಂದು ಮಾತಿನ ಹಿಂದೆ ಅದೆಂಥ ತಿಳಿವು ಅಳವಟ್ಟಿರಬೇಕಾಗುತ್ತದೆ; ಅದರಲ್ಲಿ ಅದೆಂಥ ತಪಸ್ಸು ನೆಲೆಗೊಂಡಿರಬೇಕಾಗುತ್ತದೆ. ಮೌನದ ಅನ್ನವನ್ನುಂಡು ಉಸುರಿದಷ್ಟು ಮಾತಿಗೆ ಬಲ ಹೆಚ್ಚುತ್ತದೆ. ಮುಂಗಾರಿಯ ಮೋಡದೊಳಗಿಂದ ಮಿಂಚು ಸೆಳೆದಂತೆ ಒಂದೊಂದು ಮಾತು ಮೈತಾಳಬೇಕು. ತಾಳಗೆಟ್ಟು ಭಾಷಣ ಜಡಿಯುವ ಈ ಕಾಲದಲ್ಲಿ ಮಾತಿಗೆ ನಿಯಂತ್ರಣ ಹಾಕುವುದು ಅತ್ಯವಶ್ಯವಿದೆ. ಬಹಳ ಮಾತನಾಡುವ ರೂಢಿಯು ವಾಸ್ತವಿಕವಿಲ್ಲ. ಮಾತಿನ ಮೊತ್ತನ್ನು ಭರತಿ ಮಾಡುವುದಕ್ಕೆ ಸುಳ್ಳಿನ ಗೊಬ್ಬರವನ್ನು ಬೆರಿಸಬೇಕಾಗುತ್ತದೆ; ಬಣ್ಣಬಣ್ಣದ ಹಿನ್ನೆಲೆಯನ್ನು ಹೊಲಿಯಬೇಕಾಗುತ್ತದೆ. ಮಾತು ಆಡಿದರೆ ಮುತ್ತಾಗಿರಬೇಕು; ಮಾತು ಆಡಿದರೆ ಮಿಂಚಿನ ಶಲಾಖೆಯಾಗಿರಬೇಕು. ಮಾತು ಹೆಚ್ಚು ಕೂಡದೆನ್ನುವ ವಿಷಯವನ್ನೂ ಹೆಚ್ಚು ಮಾತುಗಳಿಂದ ಹೇಳುವುದೂ ತಪ್ಪಾದೀತು.

ಅಲ್ಲಮಪ್ರಭುವಿನ ಸಹಜವಾಣಿಯನ್ನು ಕನ್ನಡಿಗರು ಸಹಸ್ರಕಂಠಗಳಿಂದ ಹೊಗಳುತ್ತಿರುವುದು ಅವರ ಸ್ವಾಭಾವಿಕ ಔದಾರ್ಯಕ್ಕೆ ಸಾಕ್ಷಿ. ವೇದದಂತೆ ಅಧಿಕಾರವಾಣಿಯೆಂದು ಕೆಲವರೆಂದರೆ, ಕಾವ್ಯದಂತೆ ಸರಸವಾಣಿ

ಯೆಂದು ಕೆಲವರಾಡುವರು. ಮಿತ್ರನ ಹಿತವಾಣಿಯಂತೆ ಒಬ್ಬನಿಗನಿಸಿದರೆ, ನಲ್ಲೆಯ ಸವಿವಾಣಿಯಂತೆ ಇನ್ನೊಬ್ಬನಿಗನಿಸುತ್ತದೆ. ನನ್ನ ವಾಣಿಯಲ್ಲಿ ಸಿದ್ಧರಿಗೆ ಆತ್ಮಜ್ಞಾನದ ಕಾಂತಿ ಕಾಣಿಸುತ್ತದಂತೆ. ಸಾಧಕರಿಗೆ ಸತ್ಯಪ್ರಕಾಶ ಗೋಚರವಾಗುತ್ತದಂತೆ. ಹರಿಯುವ ಆನಂದ ಲಹರಿಯನ್ನು ಕಂಡ ಭಕ್ತರೂ, ಮಿನುಗುವ ಆತ್ಮಾನುಭವದ ಪ್ರಭೆ ಕಂಡ ಜ್ಞಾನಿಗಳೂ ಇರುವಂತೆ, ನಿಜದ ಅರಿವು ತಿಳಿದುಕೊಂಡ ವೈರಾಗ್ಯ ಸಂಪನ್ನರೂ ಇಲ್ಲದೆ ಇಲ್ಲ. ನಾನು ಮಾಯಾ ಕೋಲಾಹಳನೆನಿಸಿದರೂ ಕನ್ನಡನುಡಿವೆಣ್ಣಿಗೆ ಒಲಿಯುದಿರಲಾಗಲಿಲ್ಲ; " ಗದ್ಯದ ಬೆಳವಣಿಗೆಗೆ ಕೈನೀರೆರೆದು ಸರಳ ಕನ್ನಡ ನುಡಿಗೆ ನಡೆಕಲಿಸಿ, ನುಡಿಕಲಿಸಿ ಕನ್ನಡನುಡಿವೆಣ್ಣಿಗೆ ಒಲಿದನು. ಮಾಯೆಗೆ ಒಲಿಯಲಿಲ್ಲ"ವೆಂದು ವಿಮರ್ಶಕರು ತಮ್ಮ ತೀರ್ಪನ್ನು ಹೇಳಿಯೇ ಬಿಟ್ಟಿದ್ದಾರೆ.

ಹರಿಹರ, ವಿರೂಪಾಕ್ಷ ಪಂಡಿತ, ಭೀಮಕವಿ, ಸೋಮರಾಜ, ಮಗ್ಗೆಯ ಮಾಯಿದೇವ, ಷಡಕ್ಷರಿಕವಿ, ಬಸವಪ್ಪಶಾಸ್ತ್ರಿ ಮೊದಲಾದ ಕವಿವರರು, ನನ್ನ ಹೆಸರಿನಲ್ಲಿ ಪ್ರಭುಲಿಂಗಲೀಲೆ, ಪ್ರಭುದೇವರ ಪುರಾಣ, ಪ್ರಭುನಟನ ತಾರಾವಳಿ, ಪ್ರಭುಚರಿತ್ರ, ಪ್ರಭುಗೀತೆ ಮೊದಲಾದ ಗ್ರಂಥಗಳನ್ನು ಬರೆದು ಅತಿಶಯವಾದ ಶ್ರಮಪಟ್ಟಿದ್ದಾರೆ. ಅದೆಲ್ಲ ಅಲ್ಲಮಪ್ರಭುವಿನ ಪ್ರಶಂಸೆಯಾಗಿರದೆ ಅಲ್ಲಮನಲ್ಲಿರುವ ಪ್ರಭುವಾದ ಗುಹೇಶ್ವರನ ಲೀಲಾ ವಿವರಣವೇ ಆಗಿದೆಯೆಂದು ನಾನು ವಿನಮ್ರವಾಗಿ ಒಪ್ಪುತ್ತೇನೆ.

ಕಲ್ಯಾಣವೆಂಬ ಪಣತಿಯಲ್ಲಿ ಭಕ್ತಿರಸವೆಂಬ ತೈಲವು ಆಗಿನ ಕಾಲಕ್ಕೆ ವಿಪುಲವಾಗಿ ಸುರಿಯಿತು ನುಡಿಗಿಂತ ನಡೆಗೆ ಹೆಚ್ಚು ಹಿರಿಮೆ ಇತ್ತೆನ್ನುವುದನ್ನು ಬಿಟ್ಟರೂ ನುಡಿಯುಷ್ಟಾದರೂ ನಡೆಗೆ ಹಿರಿಮೆ ಇತ್ತೆನ್ನುವುದನ್ನು ಒಪ್ಪಲೇಬೇಕು. ಕಲ್ಯಾಣ ಪಣತಿಯೊಳಗಿನ ಭಕ್ತಿರಸದ ತೈಲಲ್ಲಿ ಆಚಾರವೆಂಬ ಬತ್ತಿ ಹಾಕಲಾಯಿತು. ಅದಕ್ಕೆ ಬಸವಣ್ಣನವರ ಭಕ್ತಿಯ ಜ್ಯೋತಿಯು ಮುಟ್ಟಿತು. ಅದಕ್ಕೆಂತಲೇ ಆ ದೀವಿಗೆ ತೊಳಗಿ ಬೆಳಗಿತು. ಶಿವನ ಪ್ರತಾಪವೇ ಆ ಬೆಳಕು, ಆ ಬೆಳಕಿನಲ್ಲಿ ಕಣ್ಣಿದ್ದವರು ಕಣ್ತೆರೆದು ನೋಡಿದರೆ ಅಸಂಖ್ಯಾತ ಭಕ್ತ ಮಹಾಗಣಂಗಳು ಕಂಗೊಳಿಸುತ್ತಿದ್ದಾರೆ. ಆಗ ತಿಳಿಯಿತು ಇದು ಶರಣರ ನಾಡೆಂದು. ಶಿವಭಕ್ತರಿದ್ದ ದೇಶ ಪಾವನ

ವೆಂಬುದು ಹುಸಿಯೆ? ಆದಕಾರಣ ಭಕ್ತ ಬಸವಣ್ಣನು ಎನ್ನ ಪರಮಾರಾಧ್ಯನು. ಭಕ್ತ ಬಸವಣ್ಣನೆನ್ನುವುದಕ್ಕಿಂತ ಸಂಗನಬಸವಣ್ಣನೆನ್ನುವುದು ಬಾಯಿ ತುಂಬಿದಂತಾಗುತ್ತದೆ.

ಅದೇ ದೇವಲೀಲೆಯು ಇನ್ನೊಮ್ಮೆ — ಈಗೊಮ್ಮೆ ನಡೆಯಲೆಂದರೆ ಆಗಿಬಿಡುವದೇ? ಅದೆಲ್ಲಕ್ಕೂ ಕಾಲವು ಹಣ್ಣಿ ಬರಬೇಕು. ಹೂಮಿಡಿಯ ಹರಿದು, ಒತ್ತಿ ಹಣ್ಣುಮಾಡಿದನೆಂದರೆ ಹಣ್ಣಾಗಲಾರದು. ಶರಣರ ಕಾಲವನ್ನೂ, ಕಲ್ಯಾಣದ ಸಮೃದ್ಧಿಯನ್ನೂ, ಮನೆಮನೆಯ ಭಕ್ತ ಜಂಗುಳಿಯನ್ನೂ, ಹೃದಯ ಹೃದಯದಲ್ಲಿಯ ತಿಳವಿನ ಬೆಳಕನ್ನೂ ಇಂದು ಮತ್ತೊಮ್ಮೆ ನೆನೆಯಬೇಕಾಗಿದೆ. ನಿಜದ ನೆನಹಿನಲ್ಲಿ ಬೆರೆಯಿಸಬೇಕಾಗಿದೆ. ಆಗ ಹೊಳೆದೀತು ಕನ್ನಡನಾಡಿನ ಪುನರುದ್ಧಾರದ ಮಂತ್ರ; ಆಗ ತಿಳಿದೀತು ಕನ್ನಡ ನಾಡಿನ ನವಜನ್ಮದ ತಂತ್ರ.

ಇಂತು ಕನ್ನಡ ಜನಾಂಗದ ಗುಹೇಶ್ವರನ
ಮಾಯಾಕೋಳಾಹಳ,

**ಅಲ್ಲಮ**



೧೫

## ಬಸವಣ್ಣನ ಭಾಷೆ

ನನ್ನ ಭಕ್ತಬಾಂಧವರೇ,

ಕನ್ನಡನಾಡು ಒಡೆದು ಛಿನ್ನಭಿನ್ನವಾಗಿದೆಯೆಂದೂ, ಅದನ್ನು ಒಂದು ಗೂಡಿಸದೆ ಗತ್ಯಂತರವಿಲ್ಲೆಂದೂ ಎಚ್ಚತ್ತ ಕನ್ನಡಿಗರು ಕಂಡುಕೊಂಡಿದ್ದಾರೆ. ಅದು ಶುಭಲಕ್ಷಣವೇ ಸರಿ. ಆದರೆ ಕನ್ನಡಿಗರ ಮನಸ್ಸೂ ಒಡೆದು ಸಾವಿರಾರು ತುಣುಕಾಗಿವೆಯೆಂದೂ ತಿಳಿಯಬೇಕಾಗಿದೆ. ಆದರಿಂದ ಕನ್ನಡಕ್ಕೆ ಹೃದಯವಿಲ್ಲದಾಗಿ ಉಚ್ಚ ಭಾವನೆಗೆ ಸ್ಥಳ ಸಿಗಲೊಲ್ಲದು; ಕನ್ನಡಿಗರಿಗೆ ಎದೆಯಿಲ್ಲದಾಗಿ ಸಾಹಸದ ಉದ್ದಿಮೆಗೆ ಆಸರ ದೊರೆಯಲೊಲ್ಲದು. ಕನ್ನಡಿಗರ ಎದುರಿಗೆ ಇಂದು ನೂರೊಂದು ಜಾತಿಗಳು ಭೂತದಂತೆ ಅಡ್ಡಬಂದು, ಹಿಡಿದ ಕೆಲಸಕ್ಕೆ ತಡೆಯಾಗುತ್ತಿವೆ; ದುಡಿದ ಶ್ರಮವನ್ನು ಹುಡಿಗೊಳಿಸುತ್ತಿವೆ. ನನ್ನ ದೃಷ್ಟಿಯಲ್ಲಿ ಇಂದಿಗೂ ಎರಡು ಜಾತಿಗಳು ಮಾತ್ರ. ಒಂದು ಭಕ್ತಜಾತಿ; ಇನ್ನೊಂದು ಭವಿಜಾತಿ. "ವಿಪ್ರಮೊದಲು ಅಂತ್ಯಜ ಕಡೆಯಾಗಿ ಭಕ್ತರಾದವರನೆಲ್ಲ ಒಂದೇ ಎಂಬೆ; ಹಾರುವ ಮೊದಲು ಅಂತ್ಯಜ ಕಡೆಯಾಗಿ ಭವಿಯಾದವರನೊಂದೇ ಎಂಬೆ" ಎಂಬ ಸೂಕ್ತಿಯನ್ನು ನಾನು ಧರ್ಮದ ದಾರಿಯಲ್ಲಿ ಬಳಸಿದ್ದೇನೆ; ಅದು ಅಂದಿನ ಕಾಲಕ್ಕೆ ಸರಿಹೊಂದಿತು. ಇಂದಿನ ರಾಷ್ಟ್ರಜೀವನದಲ್ಲಿ ಅದನ್ನೇ "ಕನ್ನಡ ನುಡಿಯುವವರೆಲ್ಲರನ್ನೂ ಒಂದೇ ಎಂಬೆ" ಎಂದು ಮಾರ್ಪಡಿಸಲಾಗಬೇಕು. ಕನ್ನಡ ಕಟ್ಟುವ ಹೊಣೆಗಾರನಿಗೆ ಇನ್ನಾವ ಮಂತ್ರ ಬೇಕು? ಅವನಿಗೆ ದೇವನನ್ನು ಒಲಿಸುವ ಮಂತ್ರವೊಂದಾದರೆ ಸಾಕು. "ದೇವನೊಲಿದ ಭಕ್ತಂಗೆ ಇನ್ನಾವ ಮಂತ್ರವೇಕೆ?" ಎಂಬ ಮಾತನ್ನು ಮರೆತಿಲ್ಲವಷ್ಟೇ? ಸಂಗಮದೇವನನ್ನು ಒಲಿಸಿ ಧರ್ಮ ಕಟ್ಟಿದ ಉದಾಹರಣೆ ತಿಳಿದ ಕನ್ನಡಿಗರಿಗೆ ಕನ್ನಡದೇವಿಯನ್ನೊಲಿಸಿ ನಾಡು ಕಟ್ಟುವ ಹಾದಿ ಹೊಳೆಯದೇ? ನನ್ನದೇ ಒಂದು ವಚನದ ಲಿಂಗ ಬದಲಾಯಿಸಿ "ದೇವಿ ನೀನೊಲಿದವನ, ಸ್ವಾಮಿನಿ ನೀ ಹಿಡಿದವನ ಕುಲವೇನೋ?"

ಎಂದು ತನ್ನನ್ನೇ ತಾನು ಕೇಳಿಕೊಂಡರೆ, ಆ ಮಂತ್ರಕ್ಕೆ ಜಾತಿಯ ಭೂತವು ಬಯಲಾಗುವದು.

ಕನ್ನಡದೇವಿಯು ಒಲಿಯಬೇಕಾದರೆ ತ್ರಿವಿಧ ದಾಸೋಹ ಬೇಕು. ಅದಿಲ್ಲದೆ "ಆಡಿದರೇನು? ಹಾಡಿದರೇನು? ಓದಿದರೇನು? ಆಡದೇ ನವಿಲು, ಹಾಡದೆ ತಂತಿ, ಓದದೇ ಗಿಳಿ?" ಎನ್ನಬೇಕಾಗುತ್ತದೆ. ಕಾಂಚನ ವೆಂಬ ನಾಯನ್ನು ನೆಚ್ಚಿದರೆ ಕನ್ನಡಮ್ಮನನ್ನು ಮರೆದಂತಾಗುತ್ತದೆ. ಅದ್ದರಿಂದ ತ್ರಿವಿಧ ದಾಸೋಹವನ್ನು ಕೈಕೊಂಡು, ಕಾಂಚನಕ್ಕೆ ಶರಣು ಹೊಡೆದ ಶರಣನ ಮನಸ್ಸು ವಾರಿಧಿಯಂತೆ ವಿಶಾಲವಾಗಿರುತ್ತದೆ; ಕೆರೆ ಹಳ್ಳ ಬಾವಿಗಳಂತೆ ಸಂಕುಚಿತವಾಗಿ ಉಳಿಯದು. "ಕೆರೆ ಹಳ್ಳ ಬಾವಿ ಗಳು ಮೈದೆಗೆದರೆ ಗೊಳ್ಳೆ, ಗೊರಜೆ, ಚಿಪ್ಪು ಕಾಣಬಾಹವು ವಾರುಧಿ ಮೈದೆಗೆದರೆ ರತ್ನಂಗಳು ಕಾಣಬಾಹವು." ಅಂತಹ ವಿಶಾಲ ಮನಸ್ಸಿಗೆ ಅಖಿಲ ಕರ್ನಾಟಕವು ಕಂಗೊಳಿಸುವದು; ಅಖಿಲ ಕನ್ನಡಿಗರು ವಿರಾಟ ಸ್ವರೂಪವನ್ನು ತಾಳಿದ ಕನ್ನಡ ಭಗವತಿಯಂತೆ ಗೋಚರಿಸುವರು; ಕನ್ನಡದ ಸಮಸ್ತ ಸಾಹಿತ್ಯವು ಆ ತಾಯಿಯ ವಿವಿಧವಾಣಿಯಂತೆ ಕೇಳಿಬರುವದು. ಸಂಶಯವೇನು?

ತನ್ನ ತಾನು ಅರಸದೆ ಇನ್ನೊಂದರ ಸೊಬಗಿಗೆ ಮರುಳಾಗುವುದು ಕುಲಗೇಡಿತನ! ಕುಲಗೆಟ್ಟರೂ ಸುಖ ಸಿಗದು. ಇಂತಿದು ಪರಭಾಷೆಯ ಮೋಹ. "ಅರಸನ ಕಂಡು ತನ್ನ ಪುರುಷನ ಮರೆದರೆ, ಮರನೇರಿ ಕೈಯ್ಯ ಬಿಟ್ಟಂತೆ" ತನ್ನ ನಾಡಿನ ವೈಭವವನ್ನು ಸ್ಮರಿಸುವುದೂ, ಅದನ್ನು ಕಂಡು ಹಿಡಿಯುವುದೂ ನಾಡಿಗನ ಸ್ವಭಾವವಾಗಬೇಕು. ತನ್ನವರಲ್ಲಿದ್ದ ಹಿರಿಮೆ ಯನ್ನು ಕಣ್ತೆರೆದು ನೋಡದೆ, ಹೊರಗಿನಿಂದ ಬಂದ ಎರವಲವನ್ನು ಮನ ವಾರೆ ಬಣ್ಣಿಸಿದರೆ "ಬೇರೂರಿಂದ ಬಂದ ಜಂಗಮವೇ ಲಿಂಗವೆಂದು, ಮನೆ ಯಲ್ಲಿದ್ದ ಜಂಗಮವನು ಉದಾಸೀನ" ಮಾಡಿದಂತಾಯಿತೆಂದು ನೊಂದು ಕೊಳ್ಳಬೇಕು; ಬೆಂದು ಬೇಗುದಿಗೊಳ್ಳಬೇಕು.

"ನಾನು ಕನ್ನಡಿಗ; ನಾನು ಕನ್ನಡ ಕುವರ" ಎಂದು ಹೇಳಿಕೊಳ್ಳದೆ ಎಷ್ಟು ದುಡಿದರೇನು? ಎಷ್ಟು ಶ್ರಮಿಸಿದರೇನು? ಅದು ಎಳ್ಳಿಲ್ಲದ ಗಾಣವ ನಾಡಿಸಿದ ಎತ್ತಿನ ರೀತಿ. "ಸೂಳೆಯ ಮಗ ಮಹಳವ ಮಾಡಿದರೇ...

ತಾಯ ಹೆಸರಾಯಿತು; ತಂದೆಯ ಹೆಸರಿಲ್ಲ." ತ್ರಿಕರಣ ಶುದ್ಧಿಯಿಂದ ಕೈಕೊಂಡ ಕೆಲಸವನ್ನು ಕೊನೆಗಾಣಿಸಬೇಕು. "ತನು ಮುಟ್ಟಿ, ಮನ ಮುಟ್ಟದಿರ್ದರೆ" ಕನ್ನಡಾಂಬೆಯೇತರಲ್ಲಿಯೂ ಮೆಚ್ಚಳು "ಹೃದಯ ಕತ್ತರಿ, ತುದಿನಾಲಿಗೆ ಬೆಲ್ಲ"ವಾದರೆ ಜಗಕ್ಕೆ ತಿಳಿಯದೆ ಹೋದೀತು; ಆದರೆ ಜಗದೀಶನಿಗೆ ತಿಳಿಯದೆ ಹೋದೀತೇ? ಸೇವೆಯೆಂದರೆ ನಾಡಿಗರ ಮೇಲೆ ಮಾಡಿದ ಉಪಕಾರವೆನ್ನಲಾಗದು; ಅದು ಪೂಜೆ; ನಾಡತಾಯಿಯ ಪೂಜೆ. "ಬೆಳ್ಳಿತ್ತಿನ ಮರೆಯಲಿದ್ದು ಹುಲ್ಲೆಗಂಬ ತೊಡುವಂತೆ" ಸೇವೆ ಮಾಡಿದರೆ ಅದು ಸಲ್ಲದು; ಸಾರ್ಥಕವಾಗದು. ಒಳ್ಳಿಹ ವ್ಯೈಲಾರನ ಒಳಗೆಲ್ಲ ಸಣಬು ಇದ್ದುದು, ಸರ್ವಾಂತರ್ಯಾಮಿಗೆ ಗೋಚರಿಸದಿರುವದೇ? ನಾಡಸೇವೆಯಿಂದ ನಿಚ್ಚನಿಚ್ಚ ಶಿವರಾತ್ರಿಯ ಮಾಡಿದಂತಾಗಬೇಕು; ಹಾಗೆ ಮಾಡಿದ್ದೇ ಆದರೆ ಆ ಸೇವಕನಿಗೆ ಮರಣವೂ ಮಾನವಮಿ. ಅಂತರಂಗ ಶುದ್ಧಿಯಿಲ್ಲದೆ ಸೇವೆಮಾಡಿ, ದೇಶಸೇವಕನೆಂದು ಹೇಳಿಕೊಂಡರೆ, ಆ ಬಿರುದು "ತೊತ್ತಿನ ಕೊರಳಲ್ಲಿ ಹೊಂಬಿತ್ತಾಳಿಯ ಸಿಂಗಾರ ಮಾಡಿದಂತೆ"ಯೇ ಸರಿ. ಕನ್ನಡ ತಾಯಿ "ಒಮ್ಮನೆವಾದರೆ ಒಡನೆ ನುಡಿವಳು; ಇಮ್ಮನವಾದರೆ ನುಡಿಯಳು." ಇಂಥ ಹರದಿ ಆಕೆ. ಅವಳು ಅರ್ದಗಾಣಿಯ ಗೆಲ್ಲಳು; ಕಾಣಿಯ ಸೋಲಳು.

ಕನ್ನಡಿಗರು ಉದಾರಚಿತ್ತರಾಗಿ ನನ್ನನ್ನು ಅಖಿಲ ಕನ್ನಡನಾಡಿನವನೆಂದು ಮನ್ನಿಸಿದಾಗಲೇ, ನನ್ನ ವಚನಗಳ ಅರ್ಥವು ವಿಶಾಲಗೊಂಡಿತು. ವೀರಶೈವರ ಮಟ್ಟಿಗಿದ್ದ ಷಡಸ್ಥಲಗಳು ಅಖಿಲ ಕನ್ನಡಿಗರವಾದವು. ಇಷ್ಟಲಿಂಗವು ಕನ್ನಡ ಕುಲದ ಕುರುಹಾಯಿತು. ಅಖಿಲ ಜಂಗಮನಿಕರವು ಕನ್ನಡ ಕುಲದ ಜನಾಂಗವಾಯಿತು. ಎಂಟು ನೂರು ವರುಷಗಳ ಹಿಂದೆಯೇ ಲಿಂಗವಂತರೆಲ್ಲರೂ ಒಂದೇ ಎಂದು ಡಂಗುರಿಸಿದ ನಾನು ಇಂದು ಕನ್ನಡ ಕುಲವೆಲ್ಲವೂ ಒಂದೇ ಎಂದು ಉಗ್ಗಡಿಸಲಾರೆನೇ? ಅಂದು ಕೂಡಲಸಂಗನು ಒಲಿದು ನಡಿಸಿದನು; ಇಂದು ಆತನ ಶಕ್ತಿ ಕನ್ನಡಾಂಬೆಯು ಒಲಿದು ನಡಿಸಬಲ್ಲಳು ಕೌಲೆತ್ತಿನಂತೆ ಗೋಣುಹಾಕುವುದೇ ಬಸವನ ಬಳಗದ ಕುರುಹಲ್ಲ; ಗರ್ಭಗುಡಿಯ ಜಿಣಿಮಿಣಿ ದೀಪದ ಕಿರುಗತ್ತಲೆಯಲ್ಲಿ ಕುಳಿತು ಪೂಜಿಸಿಕೊಳ್ಳುವವನು ಬಸವಣ್ಣ ಅಲ್ಲ; ಬಸವನ ಬಳಗವೆಂದರೆ ಕನ್ನಡ ಕುಲ

ಅನಂತ ವಿಶ್ವವೇ ಅವರ ಧರ್ಮಮಂದಿರವಾಗಲಿ; ನೇಸರನೇ ಹೆಜ್ಜೊಡ ರಾಗಲಿ; ಕನ್ನಡಿಗರ ತನುಮನಗಳೇ ವಿಭೂತಿ ರುದ್ರಾಕ್ಷಿಗಳು. ಕನ್ನಡ ಕುಲವು ರಾಜಕಾರಣದ ಕಾರ್ಯಕಲಾಪಗಳನ್ನು ಸಾಗಿಸಲಿ; ಅದು ಸಮಾಜ ಸೇವೆಯ ನೆಲೆಗಳನ್ನು ನಿಲ್ಲಿಸಲಿ; ವಿದ್ಯಾಮಂದಿರಗಳನ್ನು ರಚಿಸಿ ತಿಳುವಿನ ತೊರೆಯನ್ನು ಹರಿಯಿಸಲಿ.

ಕೊನೆಯದಾಗಿ, ನನ್ನ ತಿದ್ದುಪಡಿಯ ತೂಕವನ್ನು ಹೇಳಿಕೊಡುವುದು ಅವಶ್ಯಕ; ಅದೊಂದು ಗೂಢತಮ ರಹಸ್ಯ. ನಾನು ನನ್ನ ಕರ್ಮಭೂಮಿಯಲ್ಲಿ ಕೆಲಸ ಮಾಡುವಾಗ ಅವೆಷ್ಟೋ ಬಿರುನುಡಿಗಳನ್ನು ಆಡಿರುವೆ; ಚುಚ್ಚುನುಡಿ ಗಳನ್ನು ಬಿಚ್ಚಿರುವೆ; ಕೆಚ್ಚುನುಡಿಗಳಿಂದ ಎಚ್ಚರಿಸಿರುವೆ; ಸಿಡಿನುಡಿಗಳಿಂದ ಸೈಗೆಡಿಸಿರುವೆ. ಆದರೆ ಅವೆಲ್ಲವುಗಳ ಏಟಿಗೆ ಹೆರವರನ್ನು ಮಾತ್ರ ಈಡು ಮಾಡಿಲ್ಲ. ಮೊದಲು ನನ್ನನ್ನು ನಾನು ಅಪಹಾಸಮಾಡಿಕೊಂಡಿದ್ದೇನೆ; ನನ್ನನ್ನು ನಾನು ಅವಹೇಲನಮಾಡಿಕೊಂಡಿದ್ದೇನೆ. ಸುತ್ತಲಿನ ಕುಂದು ಕೊರತೆಗಳಿಗಿಂತ ನನ್ನ ಕುಂದುಕೊರತೆಗಳೇ ನನಗೆ ದೊಡ್ಡವಾಗಿಯೂ, ಡೊಂಕಾಗಿಯೂ ಕಾಣಿಸಿದ್ದರಿಂದ ಹಾಗೆ ತಿದ್ದುವಳಿಗೆ ತೊಡಗಿದೆ. ಅದರಿಂ ದಲೇ ನನ್ನ ಹೃದಯ ತಿಳಿಯಿತು; ತಿಳಿಯಾಯಿತು; ತಿಳಿದೆದ್ದಿತು. ಅದು ನನ್ನವರನ್ನು ತೊಳೆಯಿತು; ಕೊಳೆಯನ್ನು ಕಳೆಯಿತು; ಮಳೆಯಾಗಿ ಇಳೆಯಿತು. ದೇವಭಕ್ತನಿಗಾಗಲಿ, ದೇಶಭಕ್ತನಿಗಾಗಲಿ ತಿಳಿದ ಹೃದಯ ಮೊದಲು ಬೇಕು. ಹೃದಯದ ತಿಳಿಯೇ ನನ್ನ ಭಾವಲಿಂಗ; ಆ ಭಾವ ಲಿಂಗವನ್ನು ಕನ್ನಡಿಗರೆಲ್ಲರೂ ಕಟ್ಟಿಕೊಂಡು ಲಿಂಗವಂತರಾಗಬೇಕು; ಆ ಭಾವಬಂಧನದಿಂದ ವ್ಯಕ್ತಿವ್ಯಕ್ತಿಯೂ ಬಿಗಿಯಲ್ಪಡಬೇಕು. ಇದೀಗ ಕನ್ನಡಿಗರನ್ನು ಕಟ್ಟುವ ಬಗೆ.

ಕನ್ನಡಿಗರನ್ನು ಕಟ್ಟದೆ ಕನ್ನಡ ಕಟ್ಟುವುದೂ, ಕರ್ನಾಟಕ ಕಟ್ಟುವುದೂ ಬಿಗಿ; ವ್ಯರ್ಥ. ಹೆಗ್ಗಣ ಒಳಗಿಟ್ಟು ಹೋರು ಬಡೆಯುವ ರೀತಿ ಅದು. ಹುಟ್ಟಿದ ಮನೆ ಬಿಟ್ಟು, ಎದೆವನೆಯನ್ನು ಕಟ್ಟಿಕೊಂಡ ಕಥೆಯಾಗಲಿ, ಹಡೆದ ವರನ್ನು ತೊರೆದು ಪಡೆದವರನ್ನು ಗಳಿಸಿದ ಸಂಗತಿಯಾಗಲಿ, ಜಾತಿಯನ್ನು ಮರೆತು ಧರ್ಮದ ದಾರಿಯನ್ನು ಹಿಡಿದ ಸುದ್ದಿಯಾಗಲಿ ಕನ್ನಡಿಗರ ಮನದಲ್ಲಿ ಮೂಡಿನಿಂತಿದ್ದು ಶುಭಸಮಾಚಾರ. 'ಸಾಯದೆ ಸ್ವರ್ಗ ಸಿಗುವದೇ?'

ಜೀವ ಹೋದ ಮಾತ್ರಕ್ಕೆ ಸ್ವರ್ಗ ದೊರಕೊಳ್ಳದು. ಜೀವ ಉಳಿಸಿಕೊಂಡು ಸಾಯಲು ಸಿದ್ಧನಾಗಬೇಕು. ಸತ್ತೇಬಿಡಬೇಕು. ಆಗ ಸ್ವರ್ಗದ ದರ್ಶನ ವಾದೀತು; ಅದು ಇದ್ದಲ್ಲಿಯೇ ಬಂದೀತು. ಸತ್ತಂತೆ ಬದುಕುವದಾಗಲಿ, ಬದುಕಿದ್ದರೂ ಸತ್ತಂತಿರುವದಾಗಲಿ ಸತ್ಯವಂತರ ಲಕ್ಷಣವಲ್ಲ; ಅದು ಜೀವನ್ಮೃತರ ಲಕ್ಷಣ ಒಂದು ಸಾರೆ ಜನ್ಮವೆತ್ತಿ ಬಂದು, ಬಾಗೇವಾಡಿಯ ಬಸವನು, ಸಂಗನಬಸವನಾದದ್ದೂ, ಆ ಮೇಲೆ ಕಲ್ಯಾಣಬಸವನಾದದ್ದೂ ನನಗ ಗೊತ್ತು. ಆದರೆ "ಶಿವನೇ ಬಸವ, ಬಸವ ಶಿವನೇ" ಎಂದು ಭಾವಿಕರು ತಾಳ ಕಟಿದು, ಮದ್ದಲೆ ಬಡಿದು ಎಂದಿನಿಂದಲೂ ಕೂಗುತ್ತಿರುವುದು ನನ್ನನ್ನು ಎಂಬುದು ಈ ವರೆಗೂ ತಿಳಿದಿರಲಿಲ್ಲ. ನಾನು "ಬಚ್ಚಬರಿಯ ಬಸವ" ಉಳಿದವರು "ತಮುತಮುಗಿಲ್ಲ ನೊಸಲಗಣ್ಣವರೋ ತ್ರಿಶೂಲಧಾರಿಗಳೋ" ಆಗಿ ಬಿಡುವಂತೆ ನಾನಾಗಿಲ್ಲವಾದ್ದರಿಂದ ಇಷ್ಟು ದಿನ ಮರುದನಿ ಕೊಡಲಿಲ್ಲ. "ಜಂಗಮಲಿಂಗ-ಸಂಗಸ್ವರೂಪ"ರಾದ ಕನ್ನಡಿಗರೇ, ನನ್ನ ಈ ಬಿನ್ನಹವನ್ನು ಆಲಿಸುವಿರಾ?

ಇತಿ—ಕನ್ನಡಿಗರ ಭಕ್ತಬಂಧು,

**ಬಸವ**

೧೬

# ಅಕ್ಕನ ವೈರಾಗ್ಯ

ಅಣ್ಣಂದಿರಾ,

ಕನ್ನಡನಾಡಿನ ಹಿರಿಕಿರಿಯರೆನ್ನದೆ ಸರ್ವರೂ ಅಕ್ಕಮಹಾದೇವಿಯೆಂದೋ ಮಹಾದೇವಿಯಕ್ಕನೆಂದೋ ಗೌರವಿಸುತ್ತಿರುವಾಗ, ನಾನು ಸರ್ವರಿಗೂ ಅಣ್ಣಂದಿರೆಂದು ಸಂಬೋಧಿಸದಿರುವುದು ಸಾಧ್ಯವಿಲ್ಲ. ಹೀಗಾಗುವುದು ವೈರಾಗ್ಯಜೀವನಕ್ಕೆ ಸ್ವಾಭಾವಿಕವೆಂದು ಯಾರೂ ತಿಳಿದುಕೊಳ್ಳದಿರಲಿ. ನಾನು ಮನೆಯನ್ನು ತೊರೆದವಳೇ ಹೊರತು, ಜನವನ್ನು ತೊರೆದವಳಲ್ಲ. ನನಗೆ ಹೊರಗಿನ "ಮಿಂಡ" ಬೇಕಾಗಿರಲಿಲ್ಲ; ಒಳಗಿನ "ಗಂಡ" ಬೇಕಾಗಿದ್ದನು. ಅಂತೆಯೇ "ಒಳಗಿನ ಗಂಡನವ್ವಾ, ಹೊರಗಿನ ಮಿಂಡನವ್ವಾ. ಎರಡನು ನಡಿಸಲು ಬಾರದಯ್ಯ.... ಬಿಲ್ಲು-ಬೆಳವಲಕಾಯಿ ಒಂದಾಗಿ ಹಿಡಿಯಲು ಬಾರದಯ್ಯ" ಎಂದು ಎರಡರಲ್ಲಿ ಒಂದನ್ನು, ಇಬ್ಬರಲ್ಲಿ ಒಬ್ಬನನ್ನು ಪಡೆಯುವ ದಾರಿಗೆ ಬೀಳಬೇಕಾಯ್ತು. ಅದಕ್ಕೆ ಜನರು ವೈರಾಗ್ಯ ಎಂದರು. ವೈರಾಗ್ಯವಾಗಿದ್ದರೆ, ಬಸವಣ್ಣನ ಮನೆಯ ಮಗಳಾಗಿ ಭಕ್ತಿಪ್ರಸಾದವನ್ನು ಸ್ವೀಕರಿಸುತ್ತಿದ್ದೆನೇ ? ಪ್ರಭುದೇವರ ತೊತ್ತಿನ ತೊತ್ತಿನ ಮರಿದೊತ್ತಿನ ಮಗಳಾಗಿ ಜ್ಞಾನಪ್ರಸಾದವನ್ನು ಸ್ವೀಕರಿಸುತ್ತಿದ್ದೆನೇ ? ಸಿದ್ಧರಾಮಯ್ಯನ ಶಿಶುಮಗಳಾಗಿ ಪ್ರಾಣಪ್ರಸಾದವನ್ನೂ, ಮಡಿವಾಳಯ್ಯನ ಮನೆಯ ಮಗಳಾಗಿ ನಿರ್ಮಲಪ್ರಸಾದವನ್ನೂ ಸ್ವೀಕರಿಸುತ್ತಿದ್ದೆನೇ? ಆ ಅಸಂಖ್ಯಾತ ಗಣಂಗಳೆಲ್ಲರೂ ತಮ್ಮ ಕರುಣದ ಕಂದನೆಂದು ತಲೆದಡಹಿರದಿದ್ದರೆ ಚನ್ನಮಲ್ಲಿಕಾರ್ಜುನಯ್ಯನ ಶ್ರೀಪಾದಕ್ಕೆ ನಾನೆಲ್ಲಿ ಯೋಗ್ಯಳಾಗುತ್ತಿದ್ದೆನು ?

ಇದರಲ್ಲಿ ನಾನು ಮಾಡಿದ್ದೇನು ? "ಅತ್ತಲಿತ್ತ ಹರಿವ ಮನದ ಶಿರವನರಿದಡೆ ಬಚ್ಚಬರಿಯ ಬಯಲು ಚನ್ನಮಲ್ಲಿಕಾರ್ಜುನ" ಎಂಬ ಪಾಠವನ್ನು ಮಾತ್ರ ನಾನು ಅಭ್ಯಾಸ ಮಾಡಿದೆನು. ಲಿಂಗಪೂಜೆಯೆಂದು ಮಜ್ಜನಕ್ಕೆ

ರೆಯುವುದು ಆಗ ನನಗೆ ವಿಕಾರವಾಗಿ ತೋರುತ್ತಿತ್ತು. ಆದುದರಿಂದಲೇ "ಜಲಕ್ಕೆ ಕನ್ನವನಿಕ್ಕಿ ಉದಕವ ತಂದು, ಲಿಂಗಕ್ಕೆ ಮಜ್ಜನಕ್ಕೆರೆವ ಹಗಲು ಗಳ್ಳರ ಮೆಚ್ಚುವನೇ ಚನ್ನಮಲ್ಲಿಕಾರ್ಜುನ?" ಎಂದು ಕೇಳಿದ್ದೇನೆ.

"ಅಮೇಧ್ಯದ ಹಡಿಕೆ, ಮೂತ್ರದ ಮಡಿಕೆ, ಎಲುವಿನ ತಡಿಕೆ, ಕೀವಿನ ಕುಡಿಕೆ"ಯಾದ ದೇಹವನ್ನು ಸುಡಲೆಂದೆ; "ಒಡಲವಿಡಿದು ಕೆಡೆದಿರು, ಚನ್ನ ಮಲ್ಲಿಕಾರ್ಜುನನರಿ ಮರುಳೇ" ಎಂದು ಬಗೆದೆ. ಚನ್ನಮಲ್ಲಿಕಾರ್ಜುನನರಿದ ಬಳಿಕ ಆ ಕಾಯವ ನಾಯಿ ತಿಂದರೇನು, ನೀರು ಕುಡಿದರೇನು? ಅಲ್ಲಿಯ ವರೆಗೆ ಕಾಯ ಕರ್ರನೆ ಕಂದಿದರೇನು? ಮಿರ್ರನೆ ಮಿಂಚಿದರೇನು?

ಅಣ್ಣ ಬಸವಣ್ಣನು ಸಂಸಾರದಲ್ಲಿದ್ದುಕೊಂಡೇ ಭಕ್ತಿ ಭಾಂಡಾರಿ ಯಾದನೆಂದರೆ ಆ ದಾರಿ ನನಗೆ ಹೇಗೆ ಹಾಳತ ಆದೀತು? ವಿರಾಗಿಣಿಯೆನಿಸಿ ಕೊಂಡ ನಾನು ಸಂಸಾರಿಯೆನಿಸಿಕೊಂಡ ಬಸವನ ದಯೆಯಿಂದಲೇ ಕಾಮವ ಗೆಲಿದೆನು; ಬಸವನ ಕೃಪೆಯಿಂದಲೇ ಸೋಮಧರನ ಹಿಡಿತಂದೆನು. ಇಷ್ಟ ಲಿಕ್ಕೂ ಮೇಲಾಗಿ, ನನ್ನ ತಲೆ ಮೊಲೆ ನೋಡಿ ಸಲಹಿದ ಚನ್ನಮಲ್ಲಿಕಾರ್ಜು ನನು ಚಾಚಿದ ಕೈ ದೊಡ್ಡದು; ಅಂತೆಯೇ ನಾನವನ ಧರ್ಮದವಳಾದೆನು.

ಚನ್ನಮಲ್ಲಿಕಾರ್ಜುನನನ್ನು ಒಲಿಸುವುದು ಅಷ್ಟವಿಧಾರ್ಚನೆಗೂ ಅಸಾಧ್ಯ. ಅಂತರಂಗಧ್ಯಾನಕ್ಕೂ ಅವನು ಸಿಲುಕನು; ಜಪಸ್ತೋತ್ರಗ ಳಿಂದಲೂ ಆ ಮಾತು ಆಗದು; ಭಾವಜ್ಞಾನಗಳಿಗೆ ಶಕ್ತಿ ಸಾಲದು. ಅವನೇ ಒಲಿದು ಬರಬೇಕು; "ನೀನೊಲಿವುದೇ ಸುಖವಯ್ಯ" ಎಂದು ಬಾಯಿ ಬಿಟ್ಟು ಬಿನ್ನಯಿಸಿಕೊಂಡಿದ್ದೇನಲ್ಲವೇ? ಅದರಂತೆ "ಚನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವಿಗೆ" ನಾನು ಇಂದಿಗೂ ಶರಣು ಅನ್ನು ತ್ತಿದ್ದೇನೆ. ಯಾರಿಗೆನ್ನಬೇಕು ಗುರು ಎಂದು? ನರಜನ್ಮವ ತೊಡೆದು ಹರಜನ್ಮವ ಮಾಡುವದಕ್ಕೆ ಸಮರ್ಥನಾಗಿರಬೇಕು; ಭವಬಂಧನ ಬಿಡಿಸಿ ಪರಮ ಸುಖವ ತೋರಲು ಬಲ್ಲಿದನಾಗಿರಬೇಕು; ಭಯಿಯೆಂಬುದನ್ನು ತೊಡೆದು ಭಕ್ತೆಯೆನಿಸುವಂತೆ ಮಾರ್ಪಡಿಸಬಲ್ಲ ಸತ್ವಶಾಲಿಯಾಗಿರಬೇಕು.

ಮಹಾಸಮರ್ಥನಾದ ಗುರುವು ಶಿಷ್ಯನಲ್ಲಿ ದಿವ್ಯ ಶಕ್ತಿಗಳನ್ನು ಪ್ರಕಟ ಗೊಳಿಸಬಲ್ಲನು. ಆದರೆ ಶಿಷ್ಯನಲ್ಲಿಯೂ ಒಂದು ಸತ್ವವು ಬೇಕಲ್ಲವೇ?

ಅಂಥ ಸತ್ವವು ಆತನಲ್ಲಿ ಉಂಟಾಗಬೇಕಾದರೆ ಸಂಯಮ ಜೀವನವ ಅತ್ಯಾವಶ್ಯಕ. ಅದಕ್ಕೇ ಬೇಕು ವೈರಾಗ್ಯ. ವೈರಾಗ್ಯವೇ ಜೀವನದ ಧ್ಯೇಯವಲ್ಲ; ಸಂಯಮ ಮಾತ್ರ ವೈರಾಗ್ಯದ ಜೀವಾಳವು. ನಿಜವಾದ ಸಂಯಮವು ಪ್ರಾಪ್ತವಾಗದಿದ್ದರೆ, ಅಲ್ಲಿ ವೈರಾಗ್ಯವಾದರೂ ಬೇಕು. ಸಂಯಮವಿಲ್ಲದಿರುವಲ್ಲಿ ಪ್ರಾಣವು ಆ ವ್ಯಕ್ತಿಯನ್ನು ಆಳುತ್ತದೆ; ಆಗ ಆ ವ್ಯಕ್ತಿ ಮನುಷ್ಯನಲ್ಲ; ಪ್ರಾಣಿ ಸಂಯಮದಿಂದ ರೇತಸ್ಸಿನ ಶಕ್ತಿಯು ರೂಪಾಂತರ ಹೊಂದುತ್ತದೆ; ಅದೇ ಓಜಸ್ಸು; ಓಜಸ್ಸು ಸರ್ವ ಲಿಂಗಗಳನ್ನು ಧಾರಣ ಮಾಡಬಲ್ಲ ಆಧ್ಯಾಭೌತಿಕ ಶಕ್ತಿಯೇ ಸರಿ. ಚನ್ನಮಲ್ಲಿಕಾರ್ಜುನನ ದಿವ್ಯ ಪ್ರೇಮದ ಆಧಿಪತ್ಯವನ್ನು ಸ್ಥಾಪನಗೊಳಿಸುವಾಗ ಅಡಚಣೆಗಳನ್ನು ತಂದೊಡ್ಡುವ ಕಾಮುಕತೆಯು ವಿಕಾರವನ್ನು ಹೊಡೆದು ಹಾಕುವುದಕ್ಕೆ ನಾನು ಆ ಓಜಸ್ಸಿನ ಸಹಾಯ ಪಡೆಯಬೇಕಾಯಿತು; ಅದಕ್ಕೆ ವೈರಾಗ್ಯವೇ ಸಾಧನವಾಯಿತು. ಸಂಸಾರದ ಸರ್ವ ವ್ಯವಹಾರಗಳನ್ನು ಅನಾಸಕ್ತಿಯಿಂದ ಮಾಡಿದರಾಗದೇ ? ಎಂದು ಕೇಳಬಹುದು. ನನ್ನ ಮಟ್ಟಿಗೆ, ವಿಷಯಲೋಲುಪತೆಯೂ, ಅದರ ತೃಷ್ಣೆಯೂ ಅಧ್ಯಾತ್ಮಿಕ ವಿನಾಶಕ್ಕೆ ಕಾರಣವಾಗಿರುವಂತೆ ಕಾಮಾವೇಗವೂ ಒಂದು ಬಲವಾದ ಕಾರಣವೆನಿಸಿದ್ದರಿಂದ, ಅದನ್ನು ಸಂಪೂರ್ಣವಾಗಿ ತೊಡೆದು ಹಾಕುವುದೇ ಮೊದಲ ಕೆಲಸವೆನಿಸಿತು. ಶಾರೀರಿಕ ಶಕ್ತಿಗಳನ್ನು ಉಚ್ಚಾವಸ್ಥೆಗೊಯ್ಯಲಿಕ್ಕೆ, ಭಯಾನಕವಾದ ಬಾಧೆಗಳನ್ನು ತಂದೊಡ್ಡುವ ಕಾಮುಕತೆಯನ್ನು ಉಚ್ಚಾಟನಗೊಳಿಸುವುದೇ ನನ್ನ ಪ್ರಥಮ ಕರ್ತವ್ಯವಾಯಿತು. ಆದರೆ ಕಾಮುಕತೆಯನ್ನು ಸಂಪೂರ್ಣವಾಗಿ ತ್ಯಜಿಸುವ ಕೆಲಸವು ಅದರೊಡನೆ ಕಾದಾಡಿದರೆ ಆಗದು; ಅದರ ಸಂಬಂಧವನ್ನು ತಪ್ಪಿಸಿಕೊಳ್ಳುವುದೂ, ಅದಕ್ಕೆ ನಮ್ಮ ಅಸಮ್ಮತಿ ತೋರಿಸುವುದೂ ಉಪಾಯಗಳಾಗಿವೆ. ಕಾಮಾವೇಗದಂಥ ಪ್ರಾಣದ ಹೀನ ಪ್ರವೃತ್ತಿಗಳನ್ನು ಕಳಕೊಂಡಾಗಲೇ ಭಾಗವತ ಪ್ರೇಮವು ನಮ್ಮನ್ನು ಸ್ಪರ್ಶಿಸುತದ. ಆ ದಿವ್ಯ ಸ್ಪರ್ಶದಿಂದ ಅಂತರತಮಜ್ಯೋತಿಯೂ, ಸೃಜನಕಾರೀಶಕ್ತಿಯೂ, ದಿವ್ಯಾನಂದದ ರಾಶಿಯೂ ಲಭಿಸುತ್ತವೆ. ಇಂತಿದು ನನ್ನ ವೈರಾಗ್ಯದ ಮೀಮಾಂಸೆ.

ಕಾಮವಾಸನೆಯನ್ನೂ ಆಧ್ಯಾತ್ಮಿಕತೆಯನ್ನೂ ನಾನು ಒತ್ತಟ್ಟಿಗೆ

ಕೂಡಿಸುವ ಪ್ರಯತ್ನ ಮಾಡಿದ್ದರೆ ನನಗೆ ಒಳಗಿನ ಗಂಡನಂತೂ ಸಿಗುತ್ತಿರ ಲಿಲ್ಲ; ಹೊರಗಿನ ಮಿಂಡನೂ ದೊರಕುತ್ತಿರಲಿಲ್ಲ; ಸರ್ವನಾಶಕ್ಕೆ ಈಡಾಗಿ ಜೀವನವನ್ನು ಅಸಾರ್ಥಕಗೊಳಿಸಿಕೊಳ್ಳುತ್ತಿದ್ದೆನು. ಆದರೆ ಕಾಮಾವೇಗವು ಪಾಪವೆಂದಾಗಲಿ, ಭಯಂಕರವೆಂದಾಗಲಿ ಯಾರೂ ತಿಳಕೊಳ್ಳದಿರಲಿ; ಇದೊಂದು ಕೆಳಗಿನ ಪ್ರಕೃತಿಯ ಹೀನ ಭ್ರಾಂತಿ. ಅಂಥ ಭ್ರಾಂತಿಗೀಡಾಗು ದಂತೆ ನೋಡಿಕೊಳ್ಳುವ ಕಲೆಯನ್ನು ಕೆಲವರು ಮನೆಯಲ್ಲಿ ಕಲಿಯಬಹುದು; ಕೆಲವರು ಮನೆಬಿಟ್ಟು ಹೋಗಿ ಕಲಿತುಕೊಳ್ಳಬಹುದು. ಮನೆಯಲ್ಲಿರುವ ದಾಗಲಿ ಮನೆಬಿಟ್ಟು ಹೋಗುವುದಾಗಲಿ ಮುಖ್ಯ ಕೆಲಸವಲ್ಲ. ಎಷ್ಟಗೆ ಹೋದರೆ ಆ ಭ್ರಾಂತಿಯು ಬೆಂಬಿಡುವುದೋ, ಏನು ಮಾಡಿದರೆ ಅದು ದೂರ ಜರುಗುವುದೋ ಅದನ್ನೇ ನೋಡಿಕೊಳ್ಳಬೇಕೆಂದು ನನ್ನ ಅನುಭವದಿಂದ ನಾನು ಹೇಳಬಲ್ಲೆ.

ಸ್ತ್ರೀಗೆ ಪತಿಯೇ ಪರದೈವವೆನ್ನುತ್ತ ಬಂದ ನಮ್ಮ ಹಳೆಯ ಹೇಳಿಕೆ ಯನ್ನು ತುಸು ಹೊತ್ತು ಬದಿಗಿರಿಸಿ. ಆತ್ಮ ಮಾರ್ಗದಲ್ಲಿ ಮುಂದುವರಿಯುವ ಅನುಕೂಲತೆಗಳನ್ನು ಅಂದು ಕನ್ನಡಿಗರು ನನಗೆ ಒದಗಿಸಿಕೊಟ್ಟರು. ಸ್ತ್ರೀ ಶೂದ್ರರ ಹೀನಾವಸ್ಥೆಯನ್ನು ಹೊಡೆದೋಡಿಸಿದ ಕನ್ನಡಿಗರ ಅಂದಿನ ಕ್ರಾಂತಿಗೆ ಜಗತ್ತೇ ಬೆರಗುಗೊಳ್ಳಬೇಕಾಗಿದೆ. "ವೇದಶಾಸ್ತ್ರ ಪುರಾಣಾ- ಗಮಂಗಳೆಲ್ಲ ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣ ಭೊ! ಇವ ಕುಟ್ಟಲೇಕೆ?" ಎಂದು ಇಂದಿಗೂ ನಾನು ಉಸುರುತ್ತಿದ್ದೇನೆ. ಇಂಥ ನನ್ನನ್ನು ಜನರು "ಗಂಡರಾಮಿ" ಎನ್ನುವ ಮೊದಲೇ ನಾನು ಹೇಳಿ ಕೊಂಡಿದ್ದನ್ನು ನೆನಪಿಗೆ ತಂದು ಕೊಡುತ್ತೇನೆ. ಅದೇನಂದರೆ "ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು? ಭಾವಿಸಲು ಗಂಡು ರೂಪು."

"ಪುರುಷನ ಮುಂದೆ ಸ್ತ್ರೀ ಮಾಯೆ, ಸ್ತ್ರೀಯು ಮುಂದೆ ಪುರುಷ ಮಾಯೆ." ಎಂಬುದನ್ನು ಮರೆತು ಬಿಟ್ಟಿದೆ ಪುರುಷ ವರ್ಗವು! ಹೆಣ್ಣೆಂದರೆ ಮಾಯಾ ರೂಪು; ಮೋಹಜಾಲ. ಹೆಣ್ಣು ಕೆಂಡದಂತೆ, ಗಂಡು ಬೆಣ್ಣೆ ಯಂತೆ. ಬೆಣ್ಣೆ ಕೆಂಡದ ಸನಿಹಕ್ಕೆ ಹೋದರೆ ಕರಗಿಬಿಡುತ್ತದಂತೆ. ಇವೆಲ್ಲ ವಿಚಾರಗಳು ಎಷ್ಟೇ ಸತ್ಯವಿದ್ದರೂ, ಒಂದು ನಿಶ್ಚಿತ ಸತ್ಯವೆಂಬ ಮಾತು ಧೈರ್ಯವಾಗಿ ಹೇಳುವೆನು. ಪುರುಷನ ಕಣ್ಣಿಗೆ ಸ್ತ್ರೀ ಮಾಯಾಜಾಲ

ಇದ್ದಂತೆ, ಸ್ತ್ರೀಯು ಕಣ್ಣಿಗೆ ಪುರುಷನು ಮೋಹಜಾಲವೆನ್ನುವುದೂ ಸತ್ಯವೆಂಬ ವಿಚಾರವು ಕನ್ನಡಿಗರಲ್ಲಿ ಅಳವಡಬೇಕಲ್ಲವೇ ? ಆ ಮಾಯಾಜಾಲವನ್ನಾಗಲಿ, ಈ ಮೋಹಜಾಲವನ್ನಾಗಲಿ ಹರಿದೊಗೆಯುವ ಉಪಾಯವಿಲ್ಲದೆ ಇಲ್ಲ; "ಚನ್ನಮಲ್ಲಿಕಾರ್ಜುನನೊಲಿದ ಶರಣಂಗೆ ಮಾಯೆ ಇಲ್ಲ; ಮರಿಹಿಲ್ಲ" ಚನ್ನಮಲ್ಲಿಕಾರ್ಜುನನು ಒಲಿದ ಜೀವನವು "ಕಾಯದ ಸಂಗವೇ ಲೇಸು ಕಂಡಯ್ಯಾ" ಎಂದು ನಲಿಯದಿರುವದೇ ? ಅದಕ್ಕಾಗಿಯೇ ನಾನೆಂದದ್ದು- "ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲರೆ ಹಾವಿನ ಸಂಗವೇ ಲೇಸು ಕಂಡಯ್ಯಾ."

ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವನಾದ ಚನ್ನಮಲ್ಲಿಕಾರ್ಜುನನನ್ನು ಒಲಿದಿದ್ದರಿಂದ ನಾನು ಭವರಹಿತಳು; ನಿರ್ಭಯಳು. ಕುಲಸೀಮೆ ಇಲ್ಲದ ನಿಸ್ಸೀಮ ಚೆಲುವನನ್ನು ನಾನು ಒಲಿದದ್ದರಿಂದ ನನ್ನ ಕುಲವಳಿಯಿತು. ನಾವೆಲ್ಲ ಕನ್ನಡಿಗರೆಲ್ಲರೊಂದಾಗಿ ಕನ್ನಡ ಕಟ್ಟಲೆಳಸುವವರಿಗೆಲ್ಲ ಒಂದೇ ಕುಲವು ಬೇಕು. ಚನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವರು ಬೇಕು; ಬಲುಹಳಿದು ಭವಗೆಟ್ಟು ಛಲವಳಿದವರು ಬೇಕು.

ಚಿಕ್ಕವಳಾದರೂ ಅಕ್ಕನೆಂದು ಅಕ್ಕರತೆಯಿಂದ ಕರೆದ ಶರಣ ಬಂಧುಗಳಲ್ಲಿ ಜ್ಞಾನೋತ್ತಮರಾದ ಚನ್ನಬಸವಣ್ಣನವರು "ಅನುವರಿದು, ಘನವ ಬೆರಸಿ, ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಚನ್ನಸಂಗಯ್ಯನಲ್ಲಿ ಬೆರೆಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕನಿಗಾಯಿತ್ತು." ಎಂದು ಹೇಳಿದುದರಲ್ಲಿ ಅತಿಶಯೋಕ್ತಿಯ ನೆರಳು ಸುಳಿಯದೆ ಹೋಗಿಲ್ಲವೆಂದು ನಾನಿಂದು ವಿನಯದಿಂದ ನಿವೇದನಗೊಳಿಸಲಿಚ್ಛಿಸುತ್ತೇನೆ.

ಆದ್ಯರ ಅರವತ್ತು ವಚನಗಳಿಗಾಗಲಿ, ದಣ್ಣಾಯಕರ ಇಪ್ಪತ್ತು ವಚನಗಳಿಗಾಗಲಿ, ಪ್ರಭುದೇವರ ಹತ್ತು ವಚನಗಳಿಗಾಗಲಿ, ಅಜಗಣ್ಣನ ಐದು ವಚನಗಳಿಗಾಗಲಿ—ನನ್ನ ಒಂದು ವಚನವು ಸರಿದೊರೆಯೆಂದು ಬೆಸಸುವಾಗ ಸಹ ಅದೇ ಅತಿಶಯೋಕ್ತಿಯೇ ಎದ್ದು ಕಾಣಿಸುತ್ತದೆ. ಆ ಮಾತು ಶರಣಮಹಿಮರ ವಚನಗಳ ಯೋಗ್ಯತೆಯನ್ನು ತೋರಿಸದೆ, ಅವರವರು ಬರೆದ ವಚನಗಳ ಪ್ರಮಾಣವನ್ನು ಮಾತ್ರ ತೋರಿಸುತ್ತದೆಂದು ಹೇಳಬಯಸುತ್ತೇನೆ.

ಅಕ್ಕನ ಬಳಗಗಳೂ, ಅಣ್ಣನ ಬಳಗಗಳೂ ಕನ್ನಡ ನಾಡಿನಲ್ಲಿ ಅಲ್ಲಲ್ಲಿ ವೈದೋರುತ್ತಿರುವ ಈ ಶುಭಪ್ರಸಂಗದಲ್ಲಿ ನನ್ನ ಅಂತರಂಗದ ನೈಜವಾದ ಭಾವಚಿತ್ರವನ್ನು ಕನ್ನಡಿಗರ ಮುಂದೆ ಇರಿಸಲು ಹವಣಿಸಿದೆ. ಆದರೆ ನಾನು ರೇಖಿಸಿದ್ದು ಭಾವಚಿತ್ರವೇ ಅಹುದೋ ಅಲ್ಲವೊ ನೀವೇ ನಿರ್ಣಯಿಸಿರಿ. ಹೆಂಗುಸಿನ ಬುದ್ಧಿ ಮೊಳಕಾಲ ಕೆಳಗೆ ಎನ್ನುವ ಕನ್ನಡಿಗರು ಇಲ್ಲದಿಲ್ಲ; ಅವರಿಗೆ "ಗಂಡುರೂಪಿ" ನ ಹೆಂಗಸು ಹೇಳಿದ್ದೆಂದು ತಿಳಿದರೆ ಸಾಕು.

ನನ್ನ ವೈರಾಗ್ಯವಾಗಲಿ ಸಂಸಾರತ್ಯಾಗವಾಗಲಿ ಪರೋಪಕಾರಕ್ಕಾಗಿ ಮಾಡಿದವುಗಳಲ್ಲ; ನನ್ನ ಆತ್ಮ ಕಲ್ಯಾಣಕ್ಕಾಗಿಯೇ ಮಾಡಿದವುಗಳಾಗಿವೆ ಅದಕ್ಕಾಗಿ ಯಾರೂ ನನಗೆ ಕೃತಜ್ಞರಾಗಿರಬೇಕಿಲ್ಲ. ಅಷ್ಟು ತ್ಯಾಗಮಾಡಿದ ಮಾತ್ರಕ್ಕೆ ನಾನು ಶ್ರೇಷ್ಠಳಾಗಲಿಲ್ಲ. ನೀವಾರೂ ಕನಿಷ್ಠರೆನಿಸುವದಿಲ್ಲ. ಹಲವಾರು ಜನರ ಸೇವೆಮಾಡಿದ ಮಾತ್ರಕ್ಕೆ, ನೀವು ನನ್ನನ್ನು ಪೂಜಿಸ ಬೇಕೆಂದು ನಾನು ತಿಳಿದಿಲ್ಲ; ನಾನು ಸಂಸಾರ ತ್ಯಾಗಮಾಡಿದ ಮಾತ್ರಕ್ಕೆ ಸಂಸಾರಿಗಳನ್ನೆಲ್ಲ ಸ್ವಾರ್ಥಿಗಳೆಂದು ನಾನು ಭಾವಿಸುತ್ತೇನೆಂದಲ್ಲ. ಈ ಸಂಸಾರವನ್ನು ತ್ಯಜಿಸಿದರೆ ಸ್ವರ್ಗ ಸಂಸಾರವನ್ನು ಗಳಿಸಿಕೊಂಡೆನು. ಈ ಸತ್ತು ಕೆಡುವ ಗಂಡನನ್ನು ತೊರೆದು ಸಾವಿಲ್ಲದ ಕೇಡಿಲ್ಲದ ನಲ್ಲನನ್ನು ಪಡೆದು ಕೊಂಡೆನು. ಅದೇನು ತ್ಯಾಗ ನನ್ನದು?

ಕನ್ನಡಿಗರಾದ ಅಣ್ಣಂದಿರಾ, ನಾನು ಜನ್ಮಸಾರ್ಥಕತೆಯನ್ನು ನಿಮ್ಮೊಳಗೆ ನಿಂತುಕೊಂಡೇ ಮಾಡಿಕೊಂಡೆನಲ್ಲವೇ? ಅದಕ್ಕೆ ನಿಮ್ಮಿಂದಲೇ ಅನುಕೂಲತೆಗಳುಂಟಾದವೆಂದು ನಾನು ತಿಳಿಯುತ್ತೇನೆ. ಕನ್ನಡದ ಗಾಳಿ ನೀರುಗಳನ್ನೇ ನಾನು ಸೇವಿಸಿ, ಕನ್ನಡದನ್ನವನ್ನೇ ನಾನು ಉಂಡು, ಕನ್ನಡಿಗರ ಕಣ್ಣರಿಕೆಯಲ್ಲಿಯೇ ನಾನು ನನ್ನನ್ನು ಪ್ರಗತಿಯ ಕಡೆಗೆ ಕರೆದೊಯ್ಯಲು ಸಮರ್ಥಳಾದೆನು ಅದಕ್ಕಾಗಿ ನಾನು ನಿಮ್ಮೆಲ್ಲರಿಗೆ ಚಿರಋಣಿಯು. ಆ ನಿಮ್ಮ ಋಣವನ್ನು ತೀರಿಸುವದಕ್ಕೆ ಅದೆಷ್ಟು ಸೇವೆಮಾಡಿದರೂ ಸ್ವಲ್ಪವೇ. ಸ್ವಹಿತವನ್ನು ಸಾಧಿಸುವದಕ್ಕೆ ಕನ್ನಡಿಗರು ನನಗೆ ಅನುಕೂಲರಾದಂತೆ, ತಮ್ಮೆಲ್ಲರ ಋಣ ತೀರಿಸುವದಕ್ಕೂ ಕನ್ನಡಿಗರು ಅನುಕೂಲರಾಗಲಿ.

ಇಂತು- ಕನ್ನಡ ಅಣ್ಣಂದಿರ

"ಅಕ್ಕ" ಮಹಾದೇವಿ

೧೭

# ವಿದ್ಯಾರಣ್ಯರ ವಿಜಯಮಂತ್ರ

ನನ್ನ ಕನ್ನಡ ಕುವರರೇ,

ಕನ್ನಡಿಗರಾದ ನೀವು ಇಂದು ಕಣ್ತೆರೆದು ಹಿಂದಿನ ವೈಭವದ ಅವಶೇಷ ಗಳನ್ನು ಕಂಡು ಕಳೆದುಂಬಕೊಡಗಿದ್ದೀರಿ; ಗತಿಸಿದ ವಿಭೂತಿಗಳನ್ನು ಸ್ಮರಿಸಿ ಹುರುಪುಗೊಳ್ಳುತ್ತಿದ್ದೀರಿ; ಹಾಳು ಹಂಪೆಯನ್ನು ಕಂಡು, ಅದು ವಿಜಯ ನಗರದ ಪೂರ್ವ ಚಿಹ್ನವೆಂಬಂತೆ ಪುಲಕಗೊಳ್ಳುತ್ತಿದ್ದೀರಿ; ವಿದ್ಯಾರಣ್ಯನನ್ನು ಮಾಧವಾಚಾರ್ಯನೆನ್ನದೆ ಕನ್ನಡಕುಲದ ಯತಿವರನೆಂದು ಬಗೆಯು ತ್ತಿದ್ದೀರಿ; ಕರ್ನಾಟಕದ ಅಧಿದೈವತವಾದ ಭುವನೇಶ್ವರಿಯನ್ನು ವಂದಿಸಿ ಪುನೀತರಾಗುತ್ತಿದ್ದೀರಿ. ಕನ್ನಡದ ನಾಡಗುಡಿಯ ಕೆಳಗೆ ಕನ್ನಡಿಗರೆಲ್ಲರೂ ಸೇರಿ ಒಗ್ಗೊರಲಿನಿಂದ "ಎಲ್ಲರೂ ಒಂದೇ! ಒಂದೇ" ಎಂದು ಉಗ್ಗಡಿಸು ತ್ತಿದ್ದೀರಿ. ಆರುನೂರು ವರುಷಗಳ ಹಿಂದೆ ವಿದ್ಯಾನಗರವನ್ನು ಕಟ್ಟಿದಂತೆ, ಇಂದೆಯೂ, ವಿದ್ಯಾನಗರವನ್ನು ನಿರ್ಮಿಸುವ ಎತ್ತುಗಡೆಯಲ್ಲಿದ್ದೀರಿ. ಇದೆಲ್ಲವೂ ಒಳ್ಳೆಯ ಲಕ್ಷಣವೆಂದೇ ಹೇಳುವೆನು.

ನನ್ನ ಎಣಿಕೆಯಿಂದ ಕನ್ನಡಕುಲದಲ್ಲಿ ಇಂದು ಎರಡು ವಿಭಾಗಗಳನ್ನು ಮಾಡಬಯಸುವೆನು. ಕಲಿತ ಕುಲ ಒಂದು, ಕಲಿಯದ ಕುಲ ಇನ್ನೊಂದು. ಕಲಿತ ಕುಲವು ತಾವು ಅರಗಿಸಿಕೊಂಡ ವಿದ್ಯೆಯ ಪ್ರಭಾವವನ್ನು ತುಂಬಿ ಕೊಂಡು ಪ್ರಯತ್ನವಾದಿಯಾಗಿದೆ; ಕಲಿಯದ ಕುಲವು ಹಳೆಯ ಸಂಸ್ಕಾರ ವನ್ನೇ ಒಳಗೊಂಡು ದೈವವಾದಿಯಾಗಿದೆ. ಇಂದಿನ ಪರಿಸ್ಥಿತಿಗೆ ಅವೆರಡೂ ವಿಚಾರಗಳು ಅಪೂರ್ಣವಾಗಿವೆಯೆಂದೇ ನಾನು ತಿಳಿಯುತ್ತೇನೆ. ಪ್ರಯತ್ನ ವಾದವಾಗಲಿ, ದೈವವಾದವಾಗಲಿ ಸುಳ್ಳಿನ ಸುರುಳೆಯಲ್ಲ; ಅವು ಸತ್ಯ ಪೂರ್ಣವಾಗಿವೆ. ಆದರೂ ಅವೆರಡೂ ಪರಸ್ಪರಪೂರಕಗಳಾಗಿವೆಯೆಂದು ಕನ್ನಡಿಗರಿಗೆ ಮನವರಿಕೆಯಾಗಬೇಕಾಗಿದೆ. ತನ್ನದಲ್ಲದ ವಾದವು, ತನ್ನ

ವಾದದಷ್ಟೇ ಸತ್ಯವಾಗಿದ್ದು ಸತ್ಯಸತ್ಯಗಳು ಒಗ್ಗೂಡಿ ಸತ್ಯತರ-ಸಂಪೂರ್ಣ ಸತ್ಯವಾಗಿ ಸಂಸ್ಕಾರಗೊಂಡಾಗ ಕನ್ನಡಕುಲವು ಗೆಲುವಿನ ನಿಲುವಿಗೆ ಬರುತ್ತದೆ.

ಜಗತ್ತಿನಲ್ಲಿ ಪ್ರತಿ ಒಂದು ವ್ಯಕ್ತಿಯನ್ನು ಮೂರು ಶಕ್ತಿಗಳು ನಡೆಸಿಕೊಂಡು ಹೋಗುತ್ತಲಿವೆ. ಆ ಮೂರು ಶಕ್ತಿಗಳು ಯಾವವೆಂದರೆ—ವಿಶ್ವಶಕ್ತಿ, ಪ್ರಾರಬ್ಧ ಕರ್ಮಶಕ್ತಿ, ಆತ್ಮಶಕ್ತಿ. ನಿರಂತರವೂ ಪ್ರವಹಿಸುತ್ತಿರುವ ವಿಶ್ವಶಕ್ತಿಯು ವ್ಯಕ್ತಿಯನ್ನಾಗಲಿ, ಜನಾಂಗವನ್ನಾಗಲಿ ಸಹಜವಾದ ಪ್ರಗತಿಯ ದಾರಿಯಲ್ಲಿ ನಡೆಯಿಸಿಕೊಂಡು ಸಾಗಿರುತ್ತದೆ. ಅದು ಸಹಜ ಪ್ರಗತಿಯಾಗಿರುವದರಿಂದ ಅದರ ಗತಿ ಮಂದವೆನ್ನೋಣ. ಇನ್ನು, ವ್ಯಕ್ತಿಯ ಇಲ್ಲವೆ ಜನಾಂಗದ ಒಳಿತು ಕೆಡಕುಗಳು, ಮಿತ್ರರಿಂದ ಇಲ್ಲವೆ ಶತ್ರುಗಳಿಂದ ಒದಗಿಬರುತ್ತಲಿರುವುದು ಪ್ರಾರಬ್ಧ ಕರ್ಮಶಕ್ತಿಯಿಂದ. ವಿಶ್ವಶಕ್ತಿಯ ಪ್ರವಾಹಕ್ಕೆ ಪ್ರಾರಬ್ಧ ಕರ್ಮಶಕ್ತಿಯು ಇನ್ನೊಂದು ಪ್ರವಾಹವು ಕೂಡಿಕೊಳ್ಳುತ್ತದೆ. ಪ್ರಾರಬ್ಧ ಕರ್ಮಶಕ್ತಿಯು ಹಿತಕರವಾಗಿ ಕೂಡಿಕೊಂಡರೆ ವಿಶ್ವಶಕ್ತಿಯ ವೇಗವು ತುಸು ತೀವ್ರವಾಗುತ್ತದೆ; ಅದು ಅಹಿತಕರ ರೀತಿಯಲ್ಲಿ ಕೂಡಿಕೊಂಡರೆ ವಿಶ್ವಶಕ್ತಿಯ ಹೊನಲು ಹೆಪ್ಪುಗೊಂಡು ಮೊದಲಿಗಿಂತ ಮಂದವಾಗುತ್ತದೆ; ಇಲ್ಲವೆ ಅಗತಿಕ-ಪ್ರವಾಹವಾಗುತ್ತದೆ. ಈ ಎರಡು ಶಕ್ತಿಪ್ರವಾಹಗಳ ಸಂಗಮವನ್ನು ಅನುಕೂಲಪಡಿಸಿಕೊಂಡು ವೇಗವತ್ತರವಾಗಿ ಉಚಿತಮಾರ್ಗದಲ್ಲಿ ಸಾಗಿಸುವ ಮೂರನೆಯ ಶಕ್ತಿಯೇ ಆತ್ಮಶಕ್ತಿ. ಅದೇ ಪೌರುಷವು. ಅದು ವಿವೇಕಪೂರ್ಣವಾಗಿರುವದರಿಂದಲೂ, ದೈವಸಾನಿಧ್ಯವನ್ನು ಸಂಪಾದಿಸಿರುವದರಿಂದಲೂ ಅದಕ್ಕೆ ಮನುಷ್ಯನ ಸ್ವಾತಂತ್ರ್ಯದ ಅಧಿಷ್ಠಾನವೆನ್ನುತ್ತಾರೆ ಅದು ಪ್ರತಿಬಂಧ ಕರ್ಮವನ್ನು ಪರಿಹರಿಸುವ ಶಾಸ್ತ್ರೀಯ ಪ್ರಯತ್ನವೆಂದೂ ಅನಿಸಿಕೊಳ್ಳುವದು. ಇಂಥ ಪ್ರಯತ್ನವನ್ನು ನಿರಂತರವೂ ಎದೆಗುಂದದೆ ಮಾಡುತ್ತಿರುವಲ್ಲಿ, ಪರಮೇಶ್ವರನ ಅನುಗ್ರಹವು ಕಾಣಿಸಿಕೊಳ್ಳುತ್ತದೆ. ಹೀಗೆ ಪ್ರಯತ್ನವು ಪರಮೇಶ್ವರನ ಅನುಗ್ರಹದ ಒಂದು ಏಕಶಕ್ತಿಯಾದಾಗ ವಿಜಯ ರಹಸ್ಯವನ್ನು ಕಂಡುಕೊಳ್ಳಬಹುದು. ಅಲ್ಲಿ ಧನುರ್ಧಾರಿಯಾದ ಅರ್ಜುನನೂ, ಯೋಗೇಶ್ವರನಾದ ಕೃಷ್ಣನೂ ಕಂಗೊಳಿಸುತ್ತಾರೆ.

ಈಶಾನುಗ್ರಹವನ್ನು ಸಂಪಾದಿಸಿದ ಪ್ರಯತ್ನವು ಅಘಟಿತಘಟನೆಗಳನ್ನು ಮಾಡತೊಡಗುವದು. ಅಂದರೆ, ಅಲ್ಲಿ ಕೊರಡು ಕೊನರುವದು; ಬರಡು ಹಯನಾಗುವದು. ಅದು ಸಿದ್ಧಿಸಬೇಕಾದರೆ ಭಕ್ತಿಭಾಂಡಾರಿ ಬಸವಣ್ಣನವರೆಂದಂತೆ– "ಸತ್ಯವೆಂಬ ಕೂರಲಗನೆ ತಳೆಯಬೇಕು ಅಲ್ಲಿ ಕೊಲುವೆನೆಂಬ ದೇವನ ಭಾಷೆ"ಯು ಅದೆಷ್ಟು ಪ್ರಬಲವಾಗಿದ್ದರೂ "ಗೆಲುವೆನೆಂಬ ಭಕ್ತನ ಭಾಷೆಯು" ಪ್ರಬಲತರವಾಗಿ ಪರಿಣಮಿಸುತ್ತದೆ. ಇಷ್ಟೇ ಅಲ್ಲ, ಸಮಷ್ಟಿಯ ಕೈಯಲ್ಲಿದ್ದ ದೈವಕ್ಕೆ ಹೆದರದೆ, ವ್ಯಷ್ಟಿಯ ಕೈಯಲ್ಲಿದ್ದ ಪ್ರಯತ್ನವು ವಿವೇಕಪೂರ್ಣವಾಗಿ ವರ್ತಿಸಿದ್ದಾದರೆ, ವಿಜಯವು ದೊರಕೊಳ್ಳದೆ ಇನ್ನೇನು ?

ಆರುನೂರು ವರ್ಷಗಳ ಹಿಂದೆ ಹಿಂದುಗಳಲ್ಲಿ ಸಂಘಟನೆಯಾಗುವುದು ಮುಖ್ಯ ಮಾತಾಗಿತ್ತು. ಆ ಸಂಘಟನೆಯ ಪ್ರತೀಕವಾಗಿ ಹುಕ್ಕರಾಯನು ಹರಿಹರನಾಗಿ ಮಾರ್ಪಟ್ಟನು ದುರ್ದೈವದಿಂದ ಅಲ್ಲ- ಕ್ರಮಪ್ರಗತಿಗೆ ಅದು ಅವಶ್ಯವೆನಿಸಿದ್ದರಿಂದ ಮಹಮ್ಮದೀಯರು ಆಗ ಪರಕೀಯರಾಗಿದ್ದರು. ಅವರೂ ಇಂದು ಭಾರತೀಯರಾಗಿದ್ದಾರೆ. ಹಿಂದು-ಮಹಮ್ಮದೀಯರಲ್ಲಿ ಐಕ್ಯವೂ ಸಂಘಟನೆಯೂ ಅವಶ್ಯವೆಂದು ಈಗ ಪರಕೀಯರೆನಿಸಿಕೊಳ್ಳುವ ಐರೋಪ್ಯರು ತೋರಿಸಿಕೊಟ್ಟರು. ಇನ್ನು ಮುಂದೆ ಭಾರತ ಪ್ರಗತಿಯು ವಿಶ್ವಪ್ರಗತಿಯ ಒಂದಂಗವಾಗಿ ಅದಕ್ಕೆ ಸಹಾಯಕವಾಗುತ್ತಲೂ, ಸಹಾಯ ಪಡೆಯುತ್ತಲೂ ಸಾಗಬೇಕಾಗಿದೆ. ಅದಕ್ಕೆ ಮೊದಲು ಕನ್ನಡಕುಲದ ಅರಿವು ಕನ್ನಡಿಗರಿಗೆ ಆಗಬೇಕು.

ಕನ್ನಡಕುಲವು ಶ್ರೀವಿರೂಪಾಕ್ಷದೇವರ ಸಂತಾನವು; ಇಂದಿನ ಮಾತಿನಲ್ಲಿ ಕನ್ನಡಬಾವುಟದ ಕೆಳಗೆ ಕೂಡಿರುವ ದಳ ಅದು. ಕರ್ನಾಟಕವು ಅಂದು ವಿರೂಪಾಕ್ಷದೇವರದೆನಿಸಿದಂತೆ, ಇಂದು ಕನ್ನಡತಾಯಿಯದೆಂಬ ಅರಿವು ನಿರಂತರವಾಗಿರತಕ್ಕದ್ದು. ರಾಜ್ಯವೇ ದೇವಾಲಯವೆಂದೂ ನಾಡಧರ್ಮವೇ ಅದರಲ್ಲಿಯ ಪೂಜ್ಯವಾದ ಧರ್ಮವೆಂದೂ ಕನ್ನಡಕುಲದ ಭಾವನೆಯು ದೃಢಪಡಬೇಕಾಗಿದೆ. ವ್ಯವಹಾರ ಧರ್ಮವು ಐಹಿಕಫಲ ಪ್ರಧಾನವಾಗಿದ್ದರೂ ಅದಕ್ಕೂ ವೇದವೇ ಮೂಲವೆಂಬ ಮಾತು ಇಂದಿಗೂ ಸತ್ಯವಾಗಿಯೇ

ಉಳಿದಿದೆ. ಧರ್ಮದ ಸ್ವರೂಪವು ಎಂದಿಗೂ ಒಂದೇ ಆದರೂ ಅದರ ಪ್ರಕಾಶವು ಜನರ ಸ್ಥಿತಿಸಂದರ್ಭಗಳಿಗೆ ತಕ್ಕಂತೆ ಆಗಿನದಾಗ ಮಾರ್ಪಾಡಾಗುವದರಿಂದ ಇಂದಿನ ಸ್ಥಿತಿಗೆ ಒಂದುಗೂಡುವ ಧರ್ಮವೆಂದರೆ ನಾಡ ಧರ್ಮವೇ ಸರಿ.

ನಾಡಧರ್ಮದ ಜೀವಾಳವೆಂದರೆ ಬದುಕಿ ಬದುಕಿಸುವುದು; ತಾನು ಬದುಕುವುದಕ್ಕೆ ಪರರನ್ನು ಪಾತಾಳಕೊತ್ತಬೇಕಾಗಿಲ್ಲ. ಮೆಟ್ಟಬಂದವರನ್ನು ತಿರುಗಿ ಮೆಟ್ಟುವ ಉಪಾಯವು ಯುಕ್ತವಲ್ಲ. ಅಂಥ ಪ್ರತಿಕಾರವನ್ನು ತಡೆಯುವದಕ್ಕೆ ಹಿಂಜರಿಯಬಾರದು. ಆದರೆ ಅನ್ಯರು ಮಾಡುವ ನಿಂದ್ಯ ಕಾರ್ಯವು ತಾನು ಮಾಡುವಾಗ ಅದು ಶ್ಲಾಘ್ಯ ಹೇಗೆ ?

ಸನ್ಯಾಸಧರ್ಮವು ಅದೆಷ್ಟು ಶ್ರೇಷ್ಠವಾಗಿದ್ದರೂ ವಿಶಾಲ ಸಂಸಾರವನ್ನು ಕಟ್ಟಿಕೊಳ್ಳದಿದ್ದರೆ ಅದಕ್ಕೆ ಸಾರ್ಥಕತೆಯಿಲ್ಲ. ಒಬ್ಬನ ಜೀವನವನ್ನು ಮಾತ್ರ ಸಾರ್ಥಗೊಳಿಸುವದಕ್ಕೆ ನೂರುವರುಷದ ಆಯುಷ್ಯವನ್ನು ಬಯಸುವ ಕಾರಣವೇನು ? ಹಾಳಿಹದ್ದಿನಂತೆ ಜೀವಹಿಡಿದುಕೊಂಡಿರುವ ಶತಾಯುವಿಗಿಂತ ವಿಶಾಲವಾದ ರಾಷ್ಟ್ರಪ್ರಪಂಚದ ಒಂದು ಶಕ್ತಿಯಾಗಿ ಜೀವಿಸುವುದರಲ್ಲಿ ತುಂಬ ಅರ್ಥವಿದೆ. ಸನ್ಯಾಸಧರ್ಮವು ವ್ಯಕ್ತಿಯನ್ನು ಒಂದು ಮೆಟ್ಟು ಮೇಲಕ್ಕೆತ್ತುವದಕ್ಕೆ ಸಮರ್ಥವಾಗಿರುವಂತೆ, ರಾಷ್ಟ್ರವನ್ನು, ಮಾನವ ಜನಾಂಗವನ್ನು ಒಂದು ಮೆಟ್ಟು ಮೇಲಕ್ಕೆತ್ತಲು ಸಹಾಯಕವಾಗಬಲ್ಲದು. ಸಂಸಾರಿಗೆ ಸನ್ಯಾಸವು ಬೇಕಾಗಿರುವಂತೆ, ಸನ್ಯಾಸಿಗೆ ಸಂಸಾರವೂ ಬೇಕೇ ಬೇಕು. ಸಂಸಾರವನ್ನು ತೊರೆಯುವ ಸನ್ಯಾಸವಾಗಲಿ ಸನ್ಯಾಸವನ್ನು ತೊರೆಯುವ ಸಂಸಾರವಾಗಲಿ ಜೀವನಕ್ಕಿರುವ ದೊಡ್ಡ ಕೊರತೆ. ಯಾರೂ ಜೀವನಕ್ಕೊಂದು ಕೊರತೆಯನ್ನು ತಂದೊಡ್ಡದಿರಲಿ.

ನಾಡನ್ನು ಕಟ್ಟುವದಕ್ಕೆ ತಪಸ್ಸಿದ್ಧಿಪಡೆದ ಒಂದಾದರೂ ಮಹಾಜೀವವಿಲ್ಲದೆ ಗತ್ಯಂತರವಿಲ್ಲ. ಅವನು ರಾಷ್ಟ್ರವನ್ನೂ, ಜನಾಂಗವನ್ನೂ ತೂಗಿಸಿಕೊಂಡು ಹೋಗುವದಕ್ಕೆ ಸಮರ್ಥನಾಗಿರುತ್ತಾನೆ. ಸಿದ್ಧಪುರುಷನ ಜ್ಞಾನವು ರಾಜ್ಯಸೂತ್ರವನ್ನು ನಿರ್ವಹಿಸಬಲ್ಲದು; ಸಮಾಜ ಸುಧಾರಣೆಯನ್ನು ಸಾಧಿಸ

ಬಲ್ಲದು; "ಜ್ಞಾನಿನಾಚರಿತುಂ ಶಕ್ಯಂ ಸಮ್ಯಗ್ ರಾಜ್ಯಾದಿಲೌಕಿಕಂ" ಎಂಬುದು ಸನಾತನ ಸತ್ಯವಾಗಿದೆ.

ಹೀಗೆ ದೈವಪ್ರಯತ್ನವಾದಗಳನ್ನು ಏಕೀಭವಿಸಿ ಪರಿಪೂರ್ಣಗೊಳಿಸುವದೇ ವಿಜಯಮಂತ್ರ. ಈ ಮಂತ್ರವು ಕನ್ನಡಿಗರ ಹೃದ್ಗತವಾಗಲಿ.

ಇಂತು— ತಮ್ಮ
ವಿದ್ಯಾರಣ್ಯ.

---

# ೧೮

# ಕನಕನ ಮುಂಡಿಗೆ

ಕನ್ನಡ ನಾಡಿನ ಹರ-ಮುರಹರ ಸಂತಾನರೇ,

ಇದೇನು ? ಈ ಇಪ್ಪತ್ತನೇ ಶತಮಾನದಲ್ಲಿ ಎಲ್ಲಿಯದಿದು ಕನಕನ ಮುಂಡಿಗೆಯೆಂದು ಬೇಸರಪಡಬೇಡಿರಿ. ಈ ನನ್ನ ಮುಂಡಿಗೆಯನ್ನು ಮುಂದಿಟ್ಟುಕೊಂಡು ತಲೆಯೊಡಕೊಂಡರೆ, ಅಲ್ಲಿ ಕನಕನ ಕಿಂಡಿ ಕಾಣುವಿರಿ. ಈಗ ಮನೆಮನೆಗೂ ಕಣಕದಾಸರೇ ಕಂಗೊಳಿಸುತ್ತಿರುವಾಗ ಈ ಬಡ ಕನಕ ದಾಸನನ್ನು ಯಾರು ಕೇಳುವರು ? "ಕನಕನನ್ನು ಕೆಣಕಬೇಡ; ಕೆಣಕಿದ ಮೇಲೆ ತಿಣಕಬೇಡ " ಎಂದು ಆಪ್ಯತೆಯಿಂದ ಅಂದುಕೊಳ್ಳುವ ಕಾಲ ವೊಂದಿತ್ತು. ಈಗ ಕನಕನನ್ನು ಕೆಣಕಿ ಮಾತಾಡಿಸಿದರೆ ಅದೆಷ್ಟೋ ಪುಣ್ಯವೆಂದುಕೊಳ್ಳುವೆ. ಯಾಕಂದರೆ ಈಗ ಹೊಟ್ಟೆಯ ಹೋರಾಟದಲ್ಲಿ ಯಾರಿಗೆ ಬಿಡುವಿದೆ ? ಯಾರ ಹೊಟ್ಟೆ ತಣ್ಣಗಿದೆ ? ಯಾರ ತಲೆ ಶಾಂತ ವಿದೆ ? "ಎಲ್ಲರೂ ಮಾಡುವುದು ಹೊಟ್ಟೆಗಾಗಿ; ಗೇಣು ಬಟ್ಟೆಗಾಗಿ." ಸಾಂಸಾರಿಕರಷ್ಟೇ ಅಲ್ಲ; "ಸನ್ಯಾಸಿ, ಜಂಗಮ, ಜೋಗಿ, ಜಟ್ಟಿ, ಮೂಢ, ಬೈರಾಗಿ ನಾನಾ ವೇಷ ಕೊಂಬೋದು (ಸಹ) ಹೊಟ್ಟೆಗಾಗಿ, ಗೇಣು ಬಟ್ಟೆ ಗಾಗಿ." ಈ ವರ್ಗವು ಮೊದಲೇ ಪರಪೋಷಕ; ಅವರನ್ನು ಪೋಷಿಸುವವರೇ ನೆಲೆಗಟ್ಟ ಮೇಲೆ— "ವೇದವಿಪ್ರರು ತಮ್ಮ ವೃತ್ತಿಸ್ವಾಸ್ಥ್ಯವ ಕಳೆದು, ಆಧಾರವಿಲ್ಲದೆ ತಿರಿದು ತಿಂಬುವರೆಂ"ದರೆ ಆಶ್ಚರ್ಯವೇನು ? "ಬಡತನ ವೆಂಬುದು ಕಡೆತನಕ ಇರಲಿ "ಯೆನ್ನುವ ಮಂದಮತಿಗಳಿನ್ನು ನಾಡಿನಲ್ಲಿ ಕಾಣಸಿಗದೆ ಹೋಗಲಿ. ವ್ಯಾವಹಾರಿಕರಂತೂ ಅಂಥ ಮಂದಮತಿಗಳು ಮೊದಲೇ ಅಲ್ಲ; ಪಾರಮಾರ್ಥಿಕರೇನೋ ಒಂದಾನೊಂದು ಕಾಲದಲ್ಲಿ ಹಾಗೆ ಬಡತನವನ್ನು ಅಪ್ಪಿಕೊಂಡಿರಬೇಕು. ಆದರೆ ನಾನು ಹಾಗೆ ಹೇಳಲಾರೆನು. "ದಟ್ಟದಾರಿದ್ರ್ಯವನು ಪರಿಹರಿಸದಿರೆ ಮುಟ್ಟುವುದು ದೂರು ನಿನಗೆ ಕೃಷ್ಣಾ" ಎಂದು ಅಂದು ಸಹ ಹಾಡಿದವನು; "ಧನಹೀನನಗಿನ್ನಧಿಕ

ಹೀನಸ್ಥಿತಿ ? ” ಎಂದು ಹಿಂದಿನ ಕಾಲಕ್ಕೇ ಕೇಳಿ ಬಿಟ್ಟವನು; “ಕಷ್ಟ ದಾರಿದ್ರ್ಯವನು ಬಿಡಿಸದಿದ್ದರೆ ಯಾರು ಮುಟ್ಟುವರಯ್ಯ ಮುದ್ದು ಕೃಷ್ಣಾ ಎಂದು ಬೊಬ್ಬಿರಿದವನು. “ ಕಟ್ಟಿ ಕೈ ಪರರಲ್ಲಿ ಹೊಟ್ಟೆಗೋಸುಗ ಕಂಗೆಟ್ಟು ಯಾಚಿಸುವ ಭ್ರಷ್ಟ ಪ್ರಾಣಿಯೆ ನೀ ಹೇಗೆ ದಾಸನಾದೀ ! ? ” ಎಂದು ಛೀ ಹಾಕಿದವನು. “ ಸತ್ವಹೀನರ ಬಡವರನು ಕಣ್ಣೆತ್ತಿ ನೋಡೆ; ಧನಾಢ್ಯರನು ಬೆಂಬತ್ತಿ ನಡೆವೆ “ಯೆಂದು ಸ್ಪಷ್ಟೋಕ್ತಿಯಿಂದ ಧನದಾಸರನ್ನು ಬಾಯಿ ಬಿಚ್ಚಿ ಜರಿದವನು; ಇಷ್ಟೇ ಅಲ್ಲ; “ಬಲ್ಲಿದ ನೀನೆಂದು ಬಡವರ ಬಾಯ ಮೇಲೆ ಬಡಿಯದಿರು ! ಎಚ್ಚರಿಕೆ !! ” ಎಂದು ಕಿವಿಹಿಂಡಿದವನು. “ಕಾದುವ ಶೂರರಿಗೆ ಕಾಸು ಕೊಡುವವರಿಲ್ಲ ”ದಿರುವಾಗ, “ದುಃಖದ ಮಡುವಿನಂತಿರುವ ಮಕ್ಕಳ ಪಡೆದ ಮಡದಿಯ ಸಂಸಾರ ”ವನ್ನು ಕೇಳಬೇಕಾರು ? ಆದುದರಿಂದ ಇಂದು ಸಾರಿ ಹೇಳುತ್ತೇನೆ. ಏನೆಂದರೆ— ಧನವೊಂದು ಮಹಾಶಕ್ತಿ; ಅದರ ನೆರವಿಲ್ಲದೆ ಜೀವನದಲ್ಲಿ ಒಂದು ಹೆಜ್ಜೆಯನ್ನೂ ಮುಂದಿಡಲಾಗುವದಿಲ್ಲ; ಅದಿಲ್ಲದೆ ಒಂದುಸಿರು ಸಹ ಆಡಿಸಲಾಗುವದಿಲ್ಲ. ಧನಿಕ ದೈತ್ಯರ ಕಪಿಮುಷ್ಟಿಯಿಂದ ಅದನ್ನು ಮೊದಲು ಬಿಡಿಸಿ ತನ್ನಿರಿ; ಅದಕ್ಕಾಗಿ ವೀರಯೋದ್ಧರಾಗಿರಿ. ಕನಕ - ದಾಸರಾಗಬೇಡಿರಿ; ಕನಕದೊಡೆಯರಾಗಿರಿ. ಲಕ್ಷ್ಯದಲ್ಲಿಡಬೇಕಾದುದೇನೆಂದರೆ— ಎಷ್ಟು ಗಳಿಸಿದರೂ ಧನವು ನಿಮ್ಮ ಸೊತ್ತಲ್ಲ; ಧನಕ್ಕೆ ನೀವು ತೊತ್ತಲ್ಲ. ಅದೊಂದು ವಿಶ್ವಶಕ್ತಿಯ ಆಸ್ತಿ. ಅದನ್ನು ಕಾಯುವ ನಂಬಿಗೆಯ ಆಳಾಗಬೇಕಲ್ಲದೆ, ಅದರ ಕಾಲಲ್ಲಿ ಸಾಯುವ ಊಳಿಗರಲ್ಲ ದುಡ್ಡಿಲ್ಲದೆ ಕೊರಗುವದಕ್ಕೂ, ದುಡ್ಡಿನಿಂದ ಕೊಬ್ಬುವದಕ್ಕೂ ಅಂತರವೇ ಇಲ್ಲವೆನ್ನುವಂತಿದೆ. “ ತಲೆ ಬಲ್ಲಿತೆಂದು ಕಲ್ಲನೆ ಹಾಯ ” ಬೇಕೇ ?

ದುಡ್ಡಿಲ್ಲವೆಂದು ವೈರಾಗ್ಯ ಕೂಡದು; ಅದು ಅಭಾವ ವೈರಾಗ್ಯ. ಸಂಕಟ ಬಂದಾಗ ವೆಂಕಟರಮಣ ಅಂದಂತೆ. ಸುಖದಲ್ಲಿಯೂ ವೆಂಕಟ ರಮಣನನ್ನು ಸ್ಮರಿಸುವ ದಾಸರು ಬೇಕು; ಅಂಥವರೇ “ ಏನು ಬೇಡಲಿ ನಿನ್ನ ಬಳಿಗೆ ಬಂದು ? ” ಎಂದು ಕೇಳುವರಾದ್ದರಿಂದ ನಿಷ್ಕಾಮಭಕ್ತಿಯನ್ನು ಅಲ್ಲಿಯೇ ಕಾಣುವೆವು. ನಿಷ್ಕಾಮಭಕ್ತನು ಬೇಕಾಗಿದ್ದುದನ್ನು ಪಡೆಯುವನು; ಅದಿಲ್ಲದವನು ಬಹಳವಾದರೆ ಬೇಡಿದ್ದನ್ನು ಪಡೆಯಬಲ್ಲನು.

ನಿಷ್ಕಾಮಭಕ್ತನಿಗೆ ಶಿವನೂ ಅಷ್ಟೇ; ವಿಷ್ಣುವು ಅಷ್ಟೇ. ಸುಡಗಾಡವಾಸಿಯೆಂದು ಶಿವನಿಗೆ ಹೆದರನು; ಕ್ಷೀರಸಾಗರ ಶಾಯಿಯೆಂದು ವಿಷ್ಣುವಿಗೆ ನಯವಾಗನು. ಅವನು ಹರ-ಮುರಹರರಲ್ಲಿ ಕದನಸೋಡುವ ಹೇಂಟಿಗಾರನಲ್ಲ. "ಹರನೊಳು ವಿಶ್ವಾಸವನು ಬಿಡದಿರು; ಚಕ್ರಧರನೊಳು ಬಕುತಿಯ ರಚಿಸು" ಎಂಬ ಸಂದೇಶವನ್ನು ಸಾರುವ ಡಂಗುರಿಗನು. ಅವನ ಶಿವನು ಘಂಟಾಘೋಷವಾಗಿ ಹೇಳುವದೇನಂದರೆ — "ಕೇಶವನೆಡೆಗೆನ್ನೆಡೆಗಾವನೋರ್ವನು, ದ್ವೇಷಬುದ್ಧಿಯ ಮಾಡಿದರೆ ದೋಷಸಂಭವಿಸುವದು."

ನಿಜವಾಗಿ ಯಾರ ಅಂತರ್ಯವು "ಮಣ್ಣಿನಲ್ಲಿ ಬಂಧಿಸಿದ ದೇಹವ ಮಣ್ಣುಗೂಡಿಸಬೇಡ; ಜ್ಞಾನದ ಕಣ್ಣು ದೃಷ್ಟಿಯನಿತ್ತು ರಕ್ಷಿಸು" ಎಂದು ಕನವರಿಸುವದೋ ಅವನಿಗೆ ಆತ್ಮೋದ್ಧಾರವೇ ಮುಖ್ಯವಲ್ಲದೆ, ಚರ್ಚೆ ಮುಖ್ಯವಲ್ಲ ತಾನು "ತನು ನಿತ್ಯವಲ್ಲದ ಬೊಂಬೆಯೆಂದು ತೋರಿದ ದಿನವೇ ನವಜನ್ಮವಾಯಿತೆಂದು ತಿಳಿಯಬೇಕು; ಅವನು ಅದೆಂಥ ಲೌಕಿಕ ನಿಪುಣನಾಗಿರಲೊಲ್ಲನೇಕೆ; ಅವನಿಗೊಮ್ಮೆ ತನ್ನ ನೈಪುಣ್ಯವು ನಗೆಗೇಡೆಂಬುದು ತಿಳಿಯದೆ ಹೋಗುವದಿಲ್ಲ." "ಮೊದಲು ಜನನವನರಿಯೆ; ಮರಣದ ಹದನ ಕಡೆಯಲಿ ತಿಳಿಯೆ; ಆ ಮಧ್ಯದಲಿ ಸಿಕ್ಕಿ ನಾ ನಿಪುಣನೆಂಬುದು ಬಳಿಕ ನಗೆಗೇಡು" ಎಂಬ ನಿಲವಿಗೆ ಬರುವನು. "ಆವಬಲವಿದ್ದರೇನು ದೈವಬಲವಿಲ್ಲದವಗೆ" ಎಂಬ ಮಾತಿನ ಸತ್ಯವು ಗೋಚರವಾಗುವದು "ಯಾರ ಹೋಲುವೆ ನೀ ಎಲೆ ಮಾನವಾ! ಬಾಣದಲಿ ರಾಮನೇ, ತ್ರಾಣದಲಿ ಭೀಮನೇ? ಜಾಣದಲಿ ಶಿಶುಪಾಲನೇ, ಗುಣದಲಿ ಸುಧರ್ಮನೇ? ಗರುವವೇತಕೆ ನಿನಗೆ?" ಎಂದು ಮಂಕ-ಜೀವವನ್ನು ಪ್ರಶ್ನಿಸುವನು! "ಉದಯಾಸ್ತಮಾನವೆಂಬ ಎರಡು ಕೊಳಗವ ಮಾಡಿ ಆಯುಷ್ಯದ ರಾಸಿಯನು" ಅಳೆಯತೊಡಗುವನು "ತಾನ್ಯಾರೋ ದೇಹ ತಾನ್ಯಾರೋ?" ಎಂಬ ತೊಡಕನ್ನು ದಿವ್ಯಜ್ಞಾನದಿಂದ ಬಿಡಿಸಲು ತೊಡಗುತ್ತಾನೆ. ಆ ತಿಳುವಿನ ಬೆಳಕಿನಲ್ಲಿ ಪಾಪಾತ್ಮ ನಾನಲ್ಲವೆಂದೂ, ಪಾಪವೆನಗಿನಿತಿಲ್ಲವೆಂದೂ ಕಂಡುಬರುತ್ತದೆ ನಿಷ್ಪಾಪಜೀವವು ಪುಣ್ಯನಿಧಿಯನ್ನು ಸಮೀಪಿಸುತ್ತ, ಹೊಂದುಗೊಳ್ಳತೊಡಗುವದು ಆಗ — "ಒಡಲು ಹಸಿದರೆ ಅನ್ನವ ಬಿಡಬಹುದು; ಪಡೆದ ಕ್ಷೇತ್ರವ ಬಿಟ್ಟು ಹೊರಡಲು ಬಹುದು;

ಪ್ರಾಣವ ಪರರಿಗೆ ಬೇಡಿದರೆ ಕೊಡಲು ಬಹುದು; ಆದರೆ ಪ್ರಾಣದಾಯಕನಾದ ಆದಿಕೇಶವನನ್ನು ತೊರೆದು ಜೀವಿಸಬಹುದೇ?" ಎಂದು ಝೇಂಕರಿಸುತ್ತ ಜೀವವು ಜೀವೇಶನ ಪಾದಪದ್ಮಮಧುಕರವಾಗಿ ಮಕರಂದವನ್ನು ಸವಿಯತೊಡಗುವದು.

ಇಷ್ಟಾದರೆ ಈಸಬಂದಂತಾಯಿತು. ಆ ಮೇಲೆ ಈಸಬೇಕು; ಇದ್ದು ಜಯಿಸಬೇಕು. ಅವನ ಕಣ್ಣಿಗೆ "ಹೊಡುವ ಜಗವನೊಂದೆವೆಯಾಟದೆ ಬಯಲ್ಮಾಡುವ ಮರಳಿ ಸೃಷ್ಟಿಸುವ ನೋಡುವ ತಾವಲ್ಲದವನಂತೆಯೊಳ ಹೊರಗಾಡುವ ಚೇಷ್ಟಕನು" ಕಂಗೊಳಿಸುವನು. ಅವನ ಹೊರಗಣ್ಣಿಗೆ ಮಡದಿಯು — ಬಡನಡುವಿನ ಚೆನ್ನೆಯಾಗಿಯೂ, ಭಾಮಿನಿಯರ ರನ್ನೆಯಾಗಿಯೂ ಕಾಣಿಸಿದರೂ, "ವಾಣಿಯಧವನೆಂಬ ವ್ಯವಹಾರಿ ಪಟ್ಟೆಯ ಗೋಣಿಯೊಳ್ತುಂಬಿದ ರತ್ನ ಓಣಿಯೊಳ್ ಚಲ್ಲಿದಂತೆ" ಕೃತಿಗಳನ್ನು ರಚಿಸಬಲ್ಲನು. ಯಾಕಂದರೆ ಕೃತಿಪೇಳ್ದವನು ದಾಸೋತ್ತಮನೂ, ಕೇಳ್ದವಳು ಅತಿಸುಜ್ಞಾನವಧೂಟಿಯೂ ಆಗಿರುವರಲ್ಲದೆ, ಕೃತಿಗೆ ಕರ್ತನು ಆದಿಕೇಶವನಲ್ಲವೇ? ಅಂಥ ಜೀವನ್ಮುಕ್ತನು ವೈಕುಂಠವನ್ನು ಆಶಿಸದೆ, ಬೀಗಿ ಬೆಳೆದು ನಭಕಡರ್ದೊಡೆ ದೇವರ್ಕಳಾರೋಗಿಪ ಸವಿಗಾಣರೆಂದೂ, ಪೋಗಿ ಮಾಡುವದೇನೆನುತ ಲಜ್ಜಿಸಿ ತಲೆವಾಗಿದಂತಿರಬೇಕೆಂದೂ ರಾಜಾನ್ನದಂತೆ ಇಹದಲ್ಲಿಯೇ ಮುಕ್ತಜೀವನವನ್ನು ನಡೆಯಿಸುವನು.

ಅರಿತುದುದನ್ನು ಆತ್ಮಸಾತ್ ಮಾಡಿಕೊಳ್ಳದಿದ್ದರೆ ಅದೆಲ್ಲವೂ ವ್ಯರ್ಥವೇ. ಅರಿತಂತೆ ಆಚರಿಸುವುದು ಡಂಭಾಚಾರ. "ಪಟ್ಟೆನಾಮವ ಬಳಿದು, ಪಾತ್ರೆ ಕೈಯಲಿ ಹಿಡಿದು, ಗುಟ್ಟಿನಲಿ ರಹಸ್ಯವನ್ನು ಗುರುತರಿಯದೆ ಕೆಟ್ಟಕೂಗನು ಕೂಗಿ, ಬಗುಳಿ ಬಾಯಾರುವಂಥ ಹೊಟ್ಟೆಗುಡ ಮೃಗಗಳೆಲ್ಲ ಶ್ರೀವೈಷ್ಣವರೇ? ಜಂಗಲಿಂಗದೊಳಿರುವ ಚಿನ್ಮಯವ ತಿಳಿಯದೆ ಲಿಂಗಾಂಗದಾನೆಲೆಯ ಗುರುತರಿಯದೆ, ಜಂಗಮಸ್ಥಾವರದ ಭಾವವನು ತಿಳಿಯದೆ ಭಂಗಿ ಮುಕ್ಕಗಳೆಲ್ಲ ಲಿಂಗವಂತರಹರೇ? ಅಲ್ಲಾ ಖುದಾ ಎಂದು ಆತ್ಮದಲಿ ತಿಳಿಯದೆ, ಮುಲ್ಲಶಾಸ್ತ್ರದ ನೆಲೆಯ ಗುರುತರಿಯದೆ, ಜಳ್ಳುಕೂಗನು ಕೂಗಿ ಬಗುಳಿ ಬಾಯಾರುವಂಥ ಕಳ್ಳತುರುಕರಿಗೆಲ್ಲ ವೀರಸ್ವರ್ಗವುಂಟೇ?" ಎಂದು

ಖಂಡತುಂಡವಾಗಿ ಮುಖದ ಮುಂದೆ ಆಡಿದ ನನ್ನ ಸತ್ಯ ನುಡಿಗಳು ಪ್ರಿಯ ವಾಗಲಿಕ್ಕಿಲ್ಲ. ಆದರೆ ಆದಿಕೇಶವನ ಚರಣ ಸೇವಕರೂ ಸತ್ಯವನ್ನಾಡದಿದ್ದರೆ ಇನ್ನಾರು ಆಡಬೇಕು ? "ಒಗೆತನಬಿಟ್ಟು ಹೋಹಾಗ ಹಾಲಿಗೆ ಹೆಪ್ಪವೊಗೆ ದಿಕ್ಕಿದವರಾರುಂಟು ?"

ಸತ್ಯವು ಪರಮನದು; ಅದು ಬುದ್ಧಿಗೆ ಗೋಚರಿಸಲು ಇಂದ್ರಿಯಗಳು ಜ್ಞಾನವನ್ನು ಗುರುತಿಸುತ್ತವೆ ಆದಕ್ಕೆಂತಲೇ "ನೀ ಮಾಯೆಯೊಳಗೋ, ನಿನ್ನೊಳು ಮಾಯೆಯೋ ?" ಎಂದು ಕೇಳಬೇಕಾಗುತ್ತದೆ. ಆದರೆ ಮಧ್ಯಾಹ್ನವಾಗುತ್ತಲೆ ಹಸಿವು ಬುದ್ಧಿಯನ್ನು ಕೆಡಿಸಿಬಿಡುತ್ತದಲ್ಲ! ಹಸಿದವ ನಿಗೆ ತತ್ತ್ವಾರ್ಥವು ವಿಷವಾಗಿ ಪರಿಣಮಿಸುವದು "ಕಲ್ಲೊಳಗೆ ಪುಟ್ಟಿ ಕೂಗುವ ಕಪ್ಪೆಗಳಿಗೆಲ್ಲ ಅಲ್ಲಲ್ಲಿಗಾಹಾರವಿತ್ತವರದಾರೋ ? ಬೆಟ್ಟದಾ ತುದಿಯಲ್ಲಿ ಬೆಳೆದಿರ್ದ ಮರಗಳಿಗೆ ಕಟ್ಟೆಯನು ಕಟ್ಟಿ ನೆರೆ ನೀರನೆರೆದವ ರುಂಟೆ ?" ಎಂದು ಕೇಳಿ, ತಲ್ಲಣಿಸಬೇಡವೆಂದೂ, ಶಾಂತಿಯು ಕೊಳ್ಳೆಂದೂ ಉಪದೇಶಿಸುವುದು ಹಾಸ್ಯಾಸ್ಪದ. ಹಸಿವೆಗೆ ಪ್ರಥಮೋಪಾಯವೆಂದರೆ ಅನ್ನದಾನ; ಉಂಡು ತಣಿದಾಗ ಉಪದೇಶ; ಆಗ ದೊರೆಯುವುದು ಶಾಂತಿ.

ಕನಕನ ಈ ಮುಂಡಿಗೆಯು ಕನ್ನಡಿಗರಿಗೆ ತಲೆಭಾರವಾಗಲಿಲ್ಲವಾದರೆ ನಾನು ಧನ್ಯ. ವೇದವ್ಯಾಸಗುರುಗಳಪ್ಪಣೆಯಂತೆ ಯಾರೂ ಇಲ್ಲದಲ್ಲಿ ಹಣ್ಣು ತಿನ್ನಲಿಕ್ಕಾಗದೆ ತಿರುಗಿ ತಂದ ಕುರುಬ ನಾನು. ಕುರುಬನ ಮರುಳು ಮಾತುಗಳು ಯಾರಿಗೂ ಬೇಡ. ನನಗೂ ಬೇಡ; ನಾನು ಹೇಳಕೇಳಿ ಬೇಡ. ಬೇಡ ಎಂದರೂ ಬಿಡುವನಲ್ಲ. ನನ್ನ ಮುಂಡಿಗೆ ಕೇಳಿಸಿಯೇ ಬಿಡಬೇಕೆಂದ ವನು. ಬೇಸರಪಡಬೇಡಿರಿ.

ಇಂತು— ಕನ್ನಡ ಹರ-ಮುರಹರದಾಸ

ಕನಕ



# ೧೯

# ಟೀಪುವಿನ ರಾಷ್ಟ್ರಧರ್ಮ

ನನ್ನ ದೇಶಬಾಂಧವರೇ,

ಟೀಪುವು ಧರ್ಮಾಭಿಮಾನಿಯೆಂದೂ ಕ್ರೂರನೆಂದೂ ಹಳಿಯುವ ಕಾಲ ವೊಂದಿತ್ತು; ಅವನು ಬಲುಮೆಯಿಂದ ಕುಲಗೆಡಿಸುವನೆಂದೂ, ತೀರ ಸಂಕುಚಿತ ದೃಷ್ಟಿಯುಳ್ಳವನೆಂದೂ ಹೀಗಳಿಯುವ ಸಮಯವೊಂದಿತ್ತು; ಆ ಕಾಲವಿದೀಗ ಕಳೆದು ಹೋಗಿದೆ; ಆ ಸಮಯವಿಂದು ಸರಿದುಹೋಗಿದೆ. ಶೃಂಗೇರಿಮಠದ ಮಹಾಸ್ವಾಮಿಗಳಿಗೆ ನಾನು ಬರೆದ ಪತ್ರಗಳು ಪ್ರಕಟ ವಾದಂದಿನಿಂದ ಕನ್ನಡಿಗರ ಹೃದಯದಲ್ಲಿ ಕುಲಕ್ಕೆ ಕುಠಾರನೆನಿಸುವ ನನ್ನ ಭೀಕರ ಚಿತ್ರವು ಅಳುಕಿಹೋಗುತ್ತಲಿದೆ; ಆ ಚಿತ್ರದ ಸ್ಥಳದಲ್ಲಿ ಸಹೃದ ಭಾವಚಿತ್ರವು ಪಡಿಮೂಡುತ್ತಲಿದೆ. ಅದಕ್ಕೆಂತಲೇ ಇಂದಿನ ವರೆಗೆ ಮೌನ ತಾಳಿದ್ದ ನಾನು ಇಂದು ತಮಗೆ ಬರೆಯುತ್ತಿದ್ದೇನೆ "ಕರ್ನಾಟಕ ಹುಲಿ"ಯು ವಜ್ರಾದಪಿ ಕಠೋರ ಹೃದಯವು ಕುಸುಮಾದಪಿ ಕೋಮಲವೂ ಆಗಿತ್ತೆಂದು ತಿಳಿಸಬಯಸುತ್ತೇನೆ. ಸಹಾನುಭೂತಿಯಿಂದ ಕೇಳಿಕೊಳ್ಳುತ್ತೀರಾ ?

ನನ್ನ ಹಿರಿಯರು ಕನ್ನಡರಾಜ್ಯದ ಒಡೆತನವನ್ನು ಹೇಗೆಯೋ ಗಳಿಸಿ ಕೊಂಡಿರಲೊಲ್ಲರೇಕೆ ? ನಾನದಕ್ಕೆ ಒಡೆಯನೆನಿಸಿದ ದಿನವೇ ನಾನು ರಾಷ್ಟ್ರ ಧರ್ಮದ ದೀಕ್ಷೆಯನ್ನೇ ತೆಗೆದುಕೊಂಡೆನೆಂದು ಹೇಳಬಹುದು. ನನ್ನ ಆಡಳಿತದ ಮರ್ಮವು ರಾಜನೀತಿಯಲ್ಲ; ರಾಷ್ಟ್ರಧರ್ಮ; ಕನ್ನಡ ಕುಲದ ಸತ್ವಪೂಜೆ. ರಾಜ್ಯಸಿಂಹಾಸನವನ್ನಲ್ಲ ನಾನೇರಿದ್ದು; ಧರ್ಮಸಿಂಹಾಸನ. ಅಲ್ಲಿ ಕುಳಿತವನು ಹಿಂದುವೂ ಅಲ್ಲ; ಮುಸಲ್ಮಾನನೂ ಅಲ್ಲ. ಜಾತಿಗೋತ್ರ-ಕುಲಧರ್ಮ-ದೂರನಾದ ನಾನು ಜಾತೀಯ ಚಿಹ್ನವಾದ ಗಡ್ಡ ಬೆಳೆಸಿರಲಿಲ್ಲ. "ದಾಡಿಯಿಲ್ಲದ ಸಾಬರಯ್ಯನ ನಂಬಬೇಡೆಂ"ಬ ನೀತಿಯಿದ್ದರೂ ನಾನದನ್ನು ಲೆಕ್ಕಿಸಲಿಲ್ಲ. ತಂದೆಯಾದ ಹೈದರನು ನನಗೆ ಜನ್ಮವಿತ್ತರೂ,

ನನ್ನ ರಕ್ತದಲ್ಲಿರುವ ಹಸಿಯು ಕನ್ನಡಮ್ಮನ ಕಾಲ್ತೊಳೆವ ಕಾವೇರಿಯದು; ನಾನು ಆಚಾರ್ಯತ್ರಯರ ಮತಮಂತ್ರಗಳಲ್ಲಿಯ ಸನಾತನ ಪ್ರಾಣವಾಯುವನ್ನೇ ಉಸುರಾಡಿಸಿದೆನು. ರಾಷ್ಟ್ರಧರ್ಮವೇ ನನ್ನ ರಾಜನೀತಿಯೆಂದು ಹೇಳಿದೆನಲ್ಲವೇ? ಆ ರಾಷ್ಟ್ರಧರ್ಮವು ಸಂಕುಚಿತವಾಗಿ ಕನ್ನಡ-ರಾಷ್ಟ್ರದ ಮಟ್ಟಿಗೆ ಉಳಿಯುವಂತಿರಲಿಲ್ಲ; ಅದು ವಿಶ್ವವಿಶಾಲವಾಗಿ ವ್ಯಾಪಿಸಿ ನಿಲ್ಲಬೇಕಾದದ್ದು. ಆ ನೆಲೆಗೆ ನಿಲ್ಲತಕ್ಕದ್ದು ಸನಾತನ ಧರ್ಮವೊಂದೇ ಸರಿಯೆಂದು ನನ್ನ ನಂಬಿಗೆಯಿತ್ತು; ಬಾಳಾಗಿತ್ತು; ಇದಕ್ಕೆ ವ್ಯತಿರಿಕ್ತವಾಗಿ ನಿಮ್ಮೆಲ್ಲರಿಗೆ ಏನಾದರೂ ಕಂಡುಬಂದಿದ್ದರೆ, ಅದು ನನ್ನ ಆಚಾರದಲ್ಲಿ ಕಂಡುಬರುವ ದೌರ್ಬಲ್ಯವೇ ಆಹುದು. ಅದೇ ನನ್ನ ವೈಯಕ್ತಿಕ ನ್ಯೂನತೆಯು. "ಗೆಲ್ಲುವ ಗುಟ್ಟು ಅಲ್ಲಾನ ಹುಲಿಗೇ ಗೊತ್ತು" ಎನ್ನುವ ನನ್ನ ಜೀವವಾಕ್ಯದ ಜೀವಾಳವು ಸನಾತನಧರ್ಮದ ಒಂದು ಅಮರರಹಸ್ಯವಾಗಿಲ್ಲವೇ?

ಪರಕೀಯರಾಗಿ ಬಂದು ನಮ್ಮನ್ನು ಕಾಲ್ಕೆಳಗೆ ಹಾಕಿ ಮೆಟ್ಟಿ ನಿಲ್ಲುವ ಧೋರಣೆಯಿಟ್ಟುಕೊಂಡವರೆಂದು ತೋರಿದ ಬ್ರಿಟಿಷರನ್ನು, ದೇಶದಿಂದ ಕಿತ್ತಿಹಾಕುವ ಇಲ್ಲವೆ, ತೀರ ಕಡಮೆಯೆಂದರೆ ಆತ್ಮಸಂರಕ್ಷಣೆಯನ್ನು ಮಾಡಿಕೊಳ್ಳುವ ಉಪಾಯವೆಂದು ಜಗಜ್ಜೇತೃವಾದ ನೆಪೋಲಿಯನ್ನನೊಡನೆ ಪತ್ರವ್ಯವಹಾರಮಾಡಿ ಅವನ ಸ್ನೇಹಸಂಪಾದಿಸಿದೆನು; ಅವನ ಸಹಾಯವನ್ನು ಅಪೇಕ್ಷಿಸಿ ಹಾತೊರೆಯಲು, ಅದೂ ಲಭಿಸಿತು. ಅದೇನು ಸಣ್ಣಮಾತೆಂದು ನಾನು ಇಂದಿಗೂ ಒಪ್ಪಿಕೊಳ್ಳಲಾರೆನು. ಸುಮಾರು ೧೫೦ ವರುಷಗಳ ಹಿಂದೆ, ದೇಶೀಯ ರಾಜರು ರಾಷ್ಟ್ರಾಭಿಮಾನವನ್ನೂ, ಧರ್ಮಾಭಿಮಾನವನ್ನೂ ತೊರೆದುನಿಂತ ಕಾಲದಲ್ಲಿ ಒಬ್ಬ ವೀರ ಜಾಗತಿಕ ವ್ಯಕ್ತಿಯೊಡನೆ ಒಬ್ಬ ಕನ್ನಡದ ಅರಸು ಸ್ನೇಹಸಂಬಂಧವನ್ನಿಟ್ಟುಕೊಂಡಿದ್ದನೆಂದರೆ ಸಾಮಾನ್ಯವಾದ ಮಾತೇ? ಟೀಪುವು ನೆಪೋಲಿಯನ್ನನ ಮಿತ್ರನಾಗಿದ್ದನೆನ್ನುವುದು ಕನ್ನಡಿಗರಿಗೆ ಅದೆಂಥ ಅಭಿಮಾನದ ಸಂಗತಿ? ಅದರ ನೆನಹು ಪರಲೋಕವಾಸಿಯಾದ ನನ್ನ ರಕ್ತವನ್ನೂ ಕುದಿಸುತ್ತಿರುವಾಗ ಕನ್ನಡಿಗರಿಗೆ, ಅದು ವೀರಚೇತನೆಯನ್ನು ಕೊಡಲಾರದೇ? ಆ ನನ್ನ ಅಹಂಕಾರಪೂರಿತವಾದ ಪ್ರಯತ್ನವು ಯಶಸ್ವಿಯಾಗಲಿಲ್ಲ, ಆ ಮಾತು ಬೇರೆ; ಅಂಥ ಅತುಲ ಪ್ರಯತ್ನಕ್ಕೆ ನನ್ನ ನಿರಹಂಕಾರ ಭಾವನೆಯು

ಮುಂದಾಗಿ ನಿಂತಿದ್ದರೆ, ಅದು ಸಫಲವಾಗುತ್ತಿತ್ತೇನೋ. ಸಫಲವಾಗುವು ದರ ಮೇಲಿಂದಲೇ ಪ್ರಯತ್ನದ ಬೆಲೆಕಟ್ಟಬಾರದು; ಅದೆಷ್ಟು ಶ್ಲಾಘ್ಯ ವಾಗಿತ್ತೆಂದು ನೋಡುವುದೇ ಆಶಾವಾದಿಯಾದವನ ಕರ್ತವ್ಯ. ನಾನು ಅಳಿದರೂ, ಕನ್ನಡ ರಾಜ್ಯವು ಹಾಳಾದರೂ, ಇಹಲೋಕ ದೂರನಾಗಿದ್ದರೂ ನನ್ನ ಆಶಾವಾದಿತ್ವವೇ ನನ್ನ ಅಂತರಂಗವನ್ನು ಇಂದಿಗೂ ಕುಣಿಸುತ್ತಿದೆ.

ಅತುಲ ಧನವನ್ನು ವ್ಯಯಿಸಿ ಸಿದ್ಧಗೊಳಿಸಿದ ಹುಲಿಯಾಕಾರದ ಅರಸು-ಗದ್ದುಗೆಯನ್ನು ಏರುವ ಸೌಭಾಗ್ಯವು ನನಗಿರಲಿಲ್ಲವೆಂಬುದು ಕನ್ನಡ ನಾಡಿನ ಕುವರರಿಗೆ ಸಹ ಗೊತ್ತಾಗಿದೆ ಅದನ್ನೇರುವ ದಿವಸ ಮಹಾ ಉತ್ಸವವನ್ನು ನೆರವೇರಿಸಿ ಬಡಜನರ ಮದುವೆಗಳನ್ನು ಪುಕ್ಕಟೆಯಾಗಿ ಮಾಡಿಸಲಾಗುವದೆಂದೂ, ಲಗ್ನದ ಖರ್ಚನ್ನಲ್ಲದೆ ಅವರು ಬರುಹೋಗುವ ದಾರಿಯ ಖರ್ಚನ್ನೂ ಸಹ ದರ್ಬಾರದಿಂದ ಕೊಡಲಾಗುವದೆಂದೂ ಡಂಗುರ ಹೊಯಿಸಿದರೂ ಗೊತ್ತುಮಾಡಿದ ದಿವಸ ಒಂದು ಪಿಳ್ಳೆ ಸಹ ರಾಜಧಾನಿಗೆ ಬರಲಿಲ್ಲ; ಉತ್ಸವ-ಲಗ್ನಗಳ ನೆವಮಾಡಿ ಬಡಜನರನ್ನು ಕರೆಯಿಸಿಕೊಂಡು ಧರ್ಮಗೆಡಿಸುವ ಹೀನ ಕೆಲಸವನ್ನು ನಾನು ಮಾಡಬಹು ದೆಂದು ಪ್ರಜೆಗಳು ತಿಳಕೊಂಡಂತೆ ಕಂಡುಬಂತು! ಪ್ರಜಾಜನರ ಹೃದಯ ಸಿಂಹಾಸನವನ್ನು ದೊರೆಕಿಸಿಕೊಳ್ಳಲಾರದ ದೊರೆಯು ಅದೆಂಥ ಬೆಲೆಯುಳ್ಳ ಸಿಂಹಾಸನವನ್ನು ಏರಿದರೂ ಪ್ರಯೋಜನವೇನು? ಮಾಡಿಸಿಟ್ಟ ಬಂಗಾರದ ತಗಡು ಜಡಿಸಿದ, ರತ್ನಕೆಚ್ಚಿದ ಹುಲಿಯಾಕಾರದ ಗದ್ದುಗೆಯಿದ್ದರೇನು? ನೆರಳು ಬಿದ್ದ ದರಿದ್ರನು ಸಹ ವೈಭವಶಾಲಿಯಾಗಬಹುದಾದ ಹೋಮಾ ಹಕ್ಕಿಯು ಗರಿದೆಗೆದು ನಿಂತ ಛತ್ರವಾದರೇನು? ಅವಾವವೂ ನನಗೆ ಬೇಡ ವೆನಿಸಿತು. ಪ್ರಜೆಗಳ ಹೃದಯ ಸಿಂಹಾಸನವು ನನಗೆ ಮೊದಲು ಬೇಕಿತ್ತು. ಅದು ಸಿಗುವವರೆಗೆ ಸಿಂಹಾಸನವನ್ನೇರುವ ಅಧಿಕಾರವಾಗಲಿ, ಯೋಗ್ಯತೆ ಯಾಗಲಿ ನನಗೆ ಬರಲಾರದೆಂದು ಅದನ್ನು ಹಾಗೆಯೇ ಇಟ್ಟುಬಿಟ್ಟೆ. ಕಡೆಗೂ ನನಗೆ ಆ ಸಿಂಹಾಸನವನ್ನು ಏರಲಾಗಲಿಲ್ಲ. ಅದು ಹೋಗಲಿ; ಕನ್ನಡಿಗರ ಹೃದಯ ಸಿಂಹಾಸನವು ಇಂದು ಸಿಕ್ಕರೂ ನಾನು ಧನ್ಯನೇ ಸರಿ. ನನ್ನ ನಚ್ಚಿನ ಕನ್ನಡಿಗರೇ, ನಿಮ್ಮ ಹೃದಯದಲ್ಲಿ ಕಡ್ಡಿಯಷ್ಟು ನನಗೆ ಸ್ಥಳ ಕೊಡುವಿರಾ? ಯಾಕೆಂದರೆ, ಪ್ರಜೆಗಳೆಂದರೆ ಪರಮೇಶ್ವರ ಇದ್ದಹಾಗೆ.

ಷ್ಣುವಿನ ಅಂಶವಿಲ್ಲದೆ ಅರಸನಾಗಲಾರನೆಂಬ ಮಾತು ಯಾವಾಗಲೂ
ರ್ವೇ. ಆದರೆ, ಪ್ರಜಾ ಪರಮೇಶ್ವರನು ಅನುಗ್ರಹಿಸದಿದ್ದರೆ ರಾಜ
ಗುವುದು ಹೇಗೆ ? ಅಲ್ಲಿ ವಿಷ್ಣುವಿನ ಅಂಶವೆಲ್ಲಿಂದ ಬಂದೀತು ? ಅಂಥ
ನು ಅರಸನಾದರೂ ಹೇಗೆ ಆದಾನು ? ಅವನೇರಿದ್ದು ಸಿಂಹಾಸನವಲ್ಲ;
ನು ಹಂಸನೇರಿದ ಉಪ್ಪರಿಗೆಯಂತೆ ಶೋಭಿಸಲಾರದು; ಕಾಗೆ ಕುಳಿತಂತೆ
ಣಿಸುವದು.

ಮೈಸೂರಿನ ಮೂರನೇ ಯುದ್ಧದಲ್ಲಿ ಅರ್ಧರಾಜ್ಯವನ್ನು ಕಳಕೊಂಡು,
ಬ್ಬರು ಮಕ್ಕಳನ್ನು ಬ್ರಿಟಿಷರಲ್ಲಿ ಅಡವು ಇಟ್ಟ ಸಂಗತಿಯನ್ನು ತಮ್ಮೆಲ್ಲರ
ಬಂದೆ ನೆನಪು ತೆಗೆಯಲು, ದುಃಖವು ಉಕ್ಕಿ ಬರುತ್ತದೆ. ಆದರೇನು ?
ಶ್ರೀರಂಗಪಟ್ಟಣದ ಕೊನೆಯ ಯುದ್ಧವೆಂದರೆ, ಕನ್ನಡಿಗರ ಸ್ವಾತಂತ್ರ್ಯದ
ಕೊನೆಯ ಹೋರಾಟ. ಮೈಸೂರಿನ ಸುಲ್ತಾನನೆಂದು ಗೌರವಾನ್ವಿತ
ನಾಗಿದ್ದರೂ ನಾನು ಸ್ವತಃ ಆಯುಧ ಪಾಣಿಯಾಗಿ ಯುದ್ಧಕ್ಕೆ ನಿಂತು,
ಜೀವದ ಹಂಗುದೊರೆದು ಹೋರಾಡಿದರೂ ಜಯಲಕ್ಷ್ಮಿಯು ಆಗ ನನಗೆ
ಅನುಕೂಲೆಯಾಗಿರಲಿಲ್ಲ. ಕನ್ನಡದ ರಾಜ್ಯವನ್ನು ಯದುವಂಶದ ಮೊದಲಿನ
ವಂಶದವರು ಆಳಿದರೂ ನನಗೆ ಸಂತೋಷವೇ ಇತ್ತು. ಆದರೆ, ಅದು
ಸ್ವಾತಂತ್ರ್ಯ ಸೌಭಾಗ್ಯಕ್ಕೆ ಎರವಾಗುವುದು ನನಗೆ ಬೇಡವಾಗಿತ್ತು. ಆ
ದುಃಖವೇ ನನಗಿನ್ನೂ ಕೊರೆಯುತ್ತಿರುವುದು. ಅರ್ಧರಾಜ್ಯ ಹೋಗಲಿ;
ಮಕ್ಕಳು ಅಡವು ಬೀಳಲಿ; ಪರಿವಾರದವರು ತಿರುಪೆಗೆ ನಿಲ್ಲಲಿ; ಅರಮನೆ
ಹಾಳಾಗಲಿ; ದರಿಯಾ-ದೌಲತ್ತು ಅಮಂಗಲವಾಗಲಿ ಆದರೆ ನನ್ನನಾಡಿನ
ಸ್ವಾತಂತ್ರ್ಯ ಉಳಿಯಬೇಕಿತ್ತು; ಆದರಿಂದ ಕನ್ನಡಿಗರು ಹೆಡೆಯೆತ್ತಿ ನಿಲ್ಲಲು
ತಕ್ಕವರಾಗುತ್ತಿದ್ದರು.

ಎರಡು ತುಂಡಾದ ನನ್ನ ಶರೀರವನ್ನು ಶ್ರೀರಂಗಪಟ್ಟಣದ ನೆರೆಯ
ಒಂದು ಹಳ್ಳಿಗೆ ಒಯ್ದು ಗೋರಿಗೊಳಿಸಿದರು. ಅಲ್ಲಿ ನನಗೆ ನನ್ನ ತಾಯಿ-
ತಂದೆಗಳ ಸಾನಿಧ್ಯ ದೊರಕಿದರೂ, ಕನ್ನಡ ಬಳಗದಿಂದ ದೂರವಾಗಿರುವೆ.
ನಮ್ಮ ಗೋರಿಯ ಮೇಲೆ ಉನ್ನತವಾದ ಮಂದಿರವನ್ನು ಕಟ್ಟಿಸಿದ್ದರೂ

ನಾನೊಂದು ಸಂಕುಚಿತವಾದ ಕತ್ತಲಕೋಣೆಯಲ್ಲಿ ಉಸುರುಗಟ್ಟಿ, ಬಿದ್ದು ಕೊಂಡಂತಾಗಿದೆ. ಅಲ್ಲಿ ಪ್ರಶಾಂತವಾದ ವಾತಾವರಣವಿದ್ದರೂ, ನನಗದು ಸ್ಮಶಾನಶಾಂತಿಗಿಂತ ಹೆಚ್ಚಿನ ಯಾವ ವಸ್ತುವನ್ನೂ ಕೊಡಲಾರದು. "ಮಲಗಿದ ಹುಲಿಯು, ಬಂದುಹೋದವರ ತುಳಿಲಾಟದ ಸಪ್ಪಳಕ್ಕೆ ಎಚ್ಚ ರಾದೀತೆಂ"ದು ಒಬ್ಬ ಆಳು ಅಚ್ಚಗಾವಲಾಗಿ ನಿಂತಿದ್ದಾನೆ ಅಯ್ಯೋ! ಕನ್ನಡ ಹುಲಿಯೇ ನಾನು! ನಿಜವಾಗಿ ಹುಲಿಯಾಗಿದ್ದರೆ ಹೀಗೆ ಆಗುತ್ತಿತ್ತೇ? ಆದೇಕೆ? ನಾನು ಜೀವನ್ಮೃತನಂತೆ ಭ್ರಾಂತಿಗೆಡಬೇಕೆ? ಬೇಡ! ನಾನು ಸತ್ತಿಲ್ಲ! ಇನ್ನೂ ಜೀವಂತವಾಗಿದ್ದೇನೆ! ನನ್ನ ಸ್ವಾತಂತ್ರ್ಯದ ಹಸಿವೆಯು ನನ್ನನ್ನಿನ್ನೂ ಕಂಗೆಡಿಸುತ್ತಿದೆ. ನನ್ನ ವೀರವೃತ್ತಿಯು ನರನರಗಳಲ್ಲಿಯೂ ಹರಿಯುತ್ತದೆ; ಕನ್ನಡಿಗರ ಅವಮಾನದ ಕುನಸು ತೀರಿಸಿಕೊಳ್ಳುವ ಹೊಂಚಿ ನಲ್ಲಿದ್ದೇನೆ. ಕನ್ನಡಿಗರೇ, ನನ್ನಮೇಲೆ ವಿಶ್ವಾಸವಿಡಿರಿ. ನಾನು ಜಾತ್ಯಂಧ ನಲ್ಲ; ಕನ್ನಡವೇ ನನ್ನಕುಲ. ಬನ್ನಿರಿ! ಬನ್ನಿರಿ!! ಶ್ರೀರಂಗಪಟ್ಟಣಕ್ಕೊಮ್ಮೆ ಬನ್ನಿರಿ! ನನ್ನ ಭೌತಿಕ ಶರೀರವನ್ನು ಮಣ್ಣುಗೊಳಿಸಿದ ಸ್ಥಳಕ್ಕೆ ಬನ್ನಿರಿ! ಆದು ಅಳಿದು ೧೫೦ ವರುಷಗಳಾದರೂ ನನ್ನ ಜೀವವು ಪರಲೋಕದವರ ಕೈಗೆ ಸಿಲುಕದೆ, ನನ್ನ ಭೌತಿಕ ಶರೀರವನ್ನು ಅರಸುತ್ತ ಅಲ್ಲಿಯೇ ತೊಳಲು ತ್ತಿದೆ. ಐತಿಹಾಸಿಕ ಅವಶೇಷಗಳನ್ನು ಕಾಣಬಂದವರನ್ನು ಬಂಧುಬಾಂಧವ ರೆಂದು ಊಹಿಸಿ, ಚಂಗನೇ ಹಾರಿ ಅವರನ್ನು ಅಪ್ಪಿಕೊಳ್ಳುತ್ತೇನೆ. ಅವರ ಹೃದಯದಲ್ಲಿ ತೆರವಿದ್ದಷ್ಟು ಸ್ಥಳದಲ್ಲಿಯೇ ಪ್ರವೇಶಗೊಳ್ಳಲು ಹಾತೊರೆಯು ತ್ತೇನೆ. ಆದರೆ ಅದು ಸಾಧ್ಯವೆಲ್ಲಿ? ಇಲ್ಲಿ ನಾನು ಹಾಗೇ ವೇಷಬಯಲಿಟ್ಟು ಸುಳಿದಾಡುತ್ತಿದ್ದರೆ, ಅಲ್ಲಿ ವೆಲ್ಲೂರಲ್ಲಿ ನನ್ನ ಮಕ್ಕಳು ಬಂಡುಗಾರರೆನಿಸಿ, ಅಳಿದು ಹೋಗಿದ್ದರೂ ಐತಿಹಾಸಿಕ ಭಾವುಕರ ಎದೆಯಲ್ಲಿ ಮಲ್ಲಣೆಯನ್ನು ಉಂಟುಮಾಡುತ್ತಿದ್ದಾರೆ!!

ಬೇಕು, ಕನ್ನಡ ಬಂಧುಗಳೇ; ತೆರವಾದ ಎದೆಬೇಕು! ಕನ್ನಡಿಗರೇ, ನಾಡಿನಡಿಯಲ್ಲಿ ನೀಡಿದ ತನುಮನಗಳು ಬೇಕು!! ಅಂಥವರಿಗಾಗಿ ಕನ್ನ ಡಮ್ಮನ ಮುತ್ತಿನುಡಿಯು ತೆರವಾಗಿ ನಿಂತಿದೆ. ಅಂಥವರಿಗಾಗಿ ಮೃತ ಹೊಂದಿದ ಕನ್ನಡಮಹಿಮರ ಸರ್ವಶಕ್ತಿಗಳು ಸಿದ್ಧವಾಗಿ ನಿಂತಿವೆ.

ದರೆ....? ಎಂದು ಕನ್ನಡಿಗರು ಕಣ್ಣು ತೆರೆಯುವುದು? ನೆನಪಿರಲಿ—
ಗೆಲ್ಲುವ ಗುಟ್ಟು ಆಲ್ಲಾನ ಹುಲಿಗೇ ಗೊತ್ತು ” ಈ ಮಂತ್ರದಿಂದ ಕನ್ನಡಿ
ರ ಮನೋರಥವು ಸಿದ್ಧಿಸುವದೆಂದು ನನ್ನ ನಂಬುಗೆ.

ಇಂತು- ತಮ್ಮೆಲ್ಲರ ಹೃದಯಸಿಂಹಾಸನಾಕಾಂಕ್ಷಿ
ಟೀ....ಪು

## ೨೦

# ಚೆನ್ನಮ್ಮರಾಣಿಯ ವೀರವೃತ್ತಿ

ಕನ್ನಡ ಮರಿಸಿಂಹಗಳಿರಾ,

ನನ್ನ ಕಣ್ಣಿಗೆ ನೀವೆಲ್ಲರೂ ಸಿಂಹದ ಮರಿಗಳಂತೆಯೇ ತೋರುತ್ತೀರಿ ಆ ಮಾತು ನಿಮಗೆ ಮನವರಿಕೆಯಾಗಬೇಕಾಗಿದೆ. ಕನ್ನಡನಾಡು ವೀರರ ನಾಡು; ವೀರಶೈವರ ಬೀಡು; ವೀರವೈಷ್ಣವರ ಗೂಡು; ವೀರ ಶ್ರೀವೈಷ್ಣವರ ನೆಲೆ; ವೀರ ಮಹಮ್ಮದೀಯರ ತವರು. ಒಂದೇ ಮಾತಿನಲ್ಲಿ ಹೇಳಬೇಕಾದರೆ ಕನ್ನಡ ನಾಡಿನಲ್ಲಿ ಹುಟ್ಟಿದ ಹುಳುಪ್ರಕೂಡ ಕಣ್ಣುತೆರೆಯದ ಕುನ್ನಿಕೂಡ, ಹುಡಿಗೂಡಿದ ಹೆಣ್ಣುಕೂಡ ವೀರವೃತ್ತಿಯದೆಂದು ನನಗೆ ಗೊತ್ತು. ಇತ್ತೀಚೆಗೆ ಆ ಮಾತು ನಿಮಗೆ ಒಪ್ಪಿಗೆಯಾಗುತ್ತಿದೆ. ಆದರೆ ಅದು ಬುದ್ಧಿಯ ಒಪ್ಪಿಗೆ; ಹೃದಯದ ಒಪ್ಪಿಗೆಯಲ್ಲ. ಆದಾಗಬೇಕಾಗಿದೆ. ಆದರೆ ಹಾಗಾಗುವುದು ಎಂದು ? ಅದಕ್ಕೆ ಕಾಲಬೇಕು ಕಾಲನ ಗಂಡನೂ, ಕರ್ಮದ ಮಿಂಡನೂ, ಜಾಲಾಂಧಕಾರ ಮಾರ್ತಾಂಡನೂ ಆದ ಲೀಲಾಂಗನು ಕನ್ನಡ ನಾಡಿನಲ್ಲಿ ವ್ಯಕ್ತಿದೋರುವ ಮುಂಗುರುತುಗಳು ಕಂಗೊಳಿಸುತ್ತಿವೆ. ಈಗ ಅಲ್ಲಲ್ಲಿ ನಡೆದ ಕಾರ್ಯಕಲಾಪಗಳೂ, ಎಣಿಸುವ ಯೋಜನೆಗಳೂ, ನುಡಿಯುವ ಸಾಹಿತ್ಯವೂ ಆ ಮಹಾ ಉತ್ಸವದ ಪೂರ್ವಕಾರ್ಯಗಳೆಂದೇ ತಿಳಿಯಿರಿ.

ಕನ್ನಡ ಕುವರರಲ್ಲಿ ವೀರವೃತ್ತಿಯು ರಕ್ತಗತವಾಗಬೇಕಾಗಿದೆ. ಉದ್ಬೋಧಕವಾದ ಭಾಷಣವನ್ನು ಕೇಳಿ, ಹೇಡಿಯೂ ಹುರಿಗೊಂಡು ನಿಲ್ಲಬಹುದು; ಪ್ರಚೋದಕವಾದ ವಾಙ್ಮಯವನ್ನು ಓದಿ 'ಅವ್ವಾಳಿ'ಯೂ ಮೀಸೆ ಹರಿ ಹಾಕಬಹುದು. ಆದರೆ ಅದರಿಂದ ಶಾಶ್ವತ ಪ್ರಯೋಜನವಾಗದು. ಶಾಶ್ವತಪ್ರಯೋಜನವೆಂದರೆ, ಸಾಮೂಹಿಕ ಯಶಸ್ಸಿಲ್ಲದಿದ್ದರೂ ವೈಯಕ್ತಿಕವಾದ ಯಶಸ್ಸು. ಯಶಸ್ಸು ಮುಖ್ಯವಲ್ಲ; ವೀರವೃತ್ತಿಯು ಆಗ ಬಿತ್ತಿ ಆಗ ಬೆಳೆಯುವ ತೌಳಿಗನ ಮಾವಿನ ಮರವಲ್ಲ. ಮಗುವು ಹುಟ್ಟಿದಂದಿನಿಂದಲೇ ನಿರ್ಭಯತೆಯನ್ನು ಕಲಿತರೆ, ವೀರವೃತ್ತಿಯು ತಾನಾಗಿಯೇ ತಲೆ ಎತ್ತುವುದು.

ಎಲ್ಲಕ್ಕೂ ಹಿರಿಯ ಭಯವು ಸಾವಿನದು. ಸಾವಿನಂಜಿಕೆಯು ಇಲ್ಲವಾದರೆ ಅವನಿಗೆ ಇನ್ನೇತರಂಜಿಕೆಯೂ ಇಲ್ಲ. ಸಾವು ಹಳೆ ಪ್ರಕೃತಿಯನ್ನು ಬಿಟ್ಟುಕೊಡುವ ಕ್ರಿಯೆ. ಹಳೆಯುದನ್ನು ಬಿಟ್ಟುಕೊಟ್ಟರೆ ಹೊಸದು ಪ್ರಾಪ್ತವಾಗುತ್ತದೆ. ಸಾವೆಂದರೆ ಕೂಸಿಗೆ ಒಂದು ಮೊಲೆಯನ್ನು ಬಿಡಿಸಿ ಇನ್ನೊಂದು ಮೊಲೆಹಚ್ಚುವ ಅವಧಿಯೆನ್ನುವ ಮಾತು ತೀರ ಸತ್ಯ. "ಸಾವು ದೇಹಕ್ಕಿದೆ; ನನಗೆ ಸಾವಿಲ್ಲ" ವೆನ್ನುವ ಮಾತು ವೇದಾಂತಸಂದೇಶವಾದರೂ ಅದು ವ್ಯವಹಾರದಲ್ಲಿ ಅಳವಟ್ಟರೆ ಅಲ್ಲಿ ಕ್ಷಾತ್ರವೃತ್ತಿಯು ತಲೆದೋರುತ್ತದೆ. ಸಾವನ್ನು ಲೆಕ್ಕಿಸದವನೇ ಕ್ಷತ್ರಿಯನು; ಅವನೇ ವೀರನು; ಅವನ ವೃತ್ತಿಯೇ ವೀರವೃತ್ತಿ. ಸಾವು ಯಾವಾಗ ಬಂದೀತೆನ್ನುವುದರ ಭರವಸೆಯಿಲ್ಲವಾದುದರಿಂದ, ಯಾವಾಗಲೂ ನಾವು ಸಾವನ್ನು ಸ್ವಾಗತಿಸುವದಕ್ಕೆ ನಿಂತಂತೆ ಬಾಳಬೇಕು. ಸಾವಿಗೆ ಸೆರೆಯಾಳಾಗಿ ಹೋರಡುವ ಸಿದ್ಧತೆಯಲ್ಲಿದ್ದವನ ಬದುಕು ಅದೆಷ್ಟು ನಿಸ್ಪೃಹವಾಗುವದು! ಅವನ ಜೀವನವು ವೀರನಿಗೆ ಒಪ್ಪುವಂಥದು!!

ಶರೀರಕ್ಕೆ ಪ್ರಾಪ್ತವಾಗುವ ಮಾನಮನ್ನಣೆಗಳಾಗಲಿ, ಅವಹೇಲನ-ಅವಮಾನಗಳಾಗಲಿ ತನಗೆ ಸಂಬಂಧಿಸಿದವುಗಳೆಂದು ತಿಳಿದವನು ತಿಳಿಗೇಡಿ. ಅವಮಾನದ ಪ್ರಸಂಗವು ಮರಣಕ್ಕೂ ಅಸಹ್ಯವೆಂದು ಬಗೆಯುವವರುಂಟು; ವಿತ್ತ-ಸಂಪತ್ತುಗಳು ಕಳೆಯುವದಕ್ಕಿಂತ ಸಾಯುವುದು ಲೇಸೆಂದು ಭಾವಿಸುವವರುಂಟು. ಅವಮಾನಕ್ಕೆ ಈಡಾಗದೆ ಮರಣವನ್ನು ಅಪ್ಪಿಕೊಂಡವರೂ, ವಿತ್ತಹಾನಿಗೆ ಎದೆಗೆಟ್ಟು ದುರ್ಮರಣವನ್ನು ತಂದುಕೊಂಡವರೂ ಪ್ರಪಂಚದಲ್ಲಿ ವಿಪುಲವಾಗಿ ಸಿಗುವರು. ಇದರಿಂದ ತಿಳಿಯುವದೇನಂದರೆ—ಅವಮಾನವೂ ವಿತ್ತಹಾನಿಯೂ ಮರಣಕ್ಕಿಂತ ಭಯಂಕರವಾಗಿವೆ; ದುಃಖಕರವಾಗಿವೆ. "ಮಾನವನ್ನು ಅಪೇಕ್ಷಿಸದಿರುವುದೂ, ಅರ್ಜವವೃತ್ತಿಯನ್ನು ತ್ಯಜಿಸುವುದೂ ಜ್ಞಾನಿಯ ಲಕ್ಷಣ"ವೆಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ. ಆದಕಾರಣ, ಅಂಥ ಜ್ಞಾನವು ಲಭಿಸಬೇಕಾದರೆ ವೇದಾಂತವನ್ನು ಆಶ್ರಯಿಸದೆ ಗತ್ಯಂತರವಿಲ್ಲ. "ನಾನು ಅಜರ-ಅಮರ, ನನ್ನನ್ನು ಕತ್ತಿಯು ಕಡಿಯಲಾರದು; ನೀರು ತೋಯಿಸಲಾರದು; ಬೆಂಕಿಯು ಸುಡಲಾರದು. ನಾನು ನಿಷ್ಪಾಪಿ. ಸುಖದುಃಖಗಳು ನನಗೆ ಸಂಬಂಧಿಸಿದವುಗಳಲ್ಲ; ಮಾನಾಪಮಾನಗಳು

ನನ್ನನ್ನು ಕಂಗೆಡಿಸಲಾರವು. ಬಡತನ ಸಿರಿವಂತಿಕೆಗಳಿಗೆ ನಾನು ಒಳಗಾಗು ವವನಲ್ಲ " ಎನ್ನುವದರ ಅನುಭವವು ಉಂಟಾಗದಿದ್ದರೆ, ವೀರಪೌರುಷ ಕರ್ಮವನ್ನು ಮಾಡುವದಕ್ಕೆ ಸಾಮರ್ಥ್ಯವುಂಟಾಗುವದಿಲ್ಲ.

ಬುನಾದಿಯಿಂದಲೂ ಕನ್ನಡಿಗರ ರಕ್ತದಲ್ಲಿ "ಮರಣವೂ ಮಾನವಮಿ" ಯೆಂಬ ತತ್ವವು ಅಡಗಿಕೊಂಡಿದೆ. ಅದನ್ನು ಕನ್ನಡಿಗರು ಜಾಗ್ರತಗೊಳಿಸಿ ಕೊಳ್ಳುವುದು ಮೊದಲಕೆಲಸವಾಗಿದೆ. ಅದೊಂದು ತರದ ಆತ್ಮಜಾಗ್ರತಿಯೇ ಸರಿ. ಆತ್ಮಜಾಗ್ರತಿಯಾದವನಿಗೆ ಅಡೆತಡೆಗಳು ತಡೆದು ನಿಲ್ಲಲಾರವು; ದುರ್ಭೇದ್ಯವಾದ ಶಕ್ತಿಯು ಗಾಬರಿಗೊಳಿಸುವದು ಭಾರತವನ್ನೇ ನುಂಗಿದು ನಿಂತ ಬ್ರಿಟಿಶ್ ಸೈನ್ಯದ ವಿರುದ್ಧವಾಗಿ 'ಬಂಡು' ಎಬ್ಬಿಸಲಿಕ್ಕೆ ನನಗಾವ ಭಯವೂ ಉಂಟಾಗಲಿಲ್ಲ; ಯಾವ ಸಂದೇಹವೂ ತಲೆದೋರಲಿಲ್ಲ ಮರಣ ವಿಚಾರವು ಹೆದರಿಸಲಿಲ್ಲ; ರಾಜ್ಯವು ಹಾಳಾಗುವ ಯೋಚನೆಯು ತಲೆ ಕೆಡಿಸಲಿಲ್ಲ. ಸಹಾಯವು ಸಣ್ಣದಿದ್ದರೂ, ಶಕ್ತಿಯು ಸ್ವಲ್ಪವಿದ್ದರೂ ನಾನು ನನ್ನ ನಿರ್ಭಯತೆಯನ್ನು ನಂಬಿಯೇ ವೈರಿಗಳನ್ನು ಎದುರಿಸಿದೆ; ವೀರವೃತ್ತಿ ಯಲ್ಲಿ ಭರವಸೆಯನ್ನಿಟ್ಟೇ ಸಾಹಸಕ್ಕೆ ಕೈ ಹಾಕಿದೆ ನಾನು ಕೈಕೊಂಡ ಕೆಲಸವು ಸಫಲವಾಗಲಿಲ್ಲವೆಂದು ನಾನು ತಿಳಿಯುವದಿಲ್ಲ: ನಾನು ಕೊನೆಯ ವರೆಗೂ ವಿಜಯವನ್ನೇ ಸಂಪಾದಿಸಿದೆನೆಂದು ತಿಳಿಯುವೆನು. ನನ್ನ ಕರ್ತವ್ಯದಿಂದ ನಾನು ಚ್ಯುತವಾಗಲಿಲ್ಲ; ನಾನು ಹೇಡಿಗಳಂತೆ ಮೈಯುಳಿಸಿ ಕೊಳ್ಳಲಿಲ್ಲ; ಮನಗಳ್ಳರಂತೆ ಬುದ್ಧಿಗೇಡಿಯಾಗಿ ವರ್ತಿಸಲಿಲ್ಲ. ನನಗದು ವೀರಮರಣವಾಯ್ತು; ನನಗೆ ಲಭಿಸಿದ್ದು ವೀರಸ್ವರ್ಗ. ಸಾವಿತ್ರಿಯು ಸತ್ಯವಾನನನ್ನು ಅನುಸರಿಸಿದಂತೆ ನಾನು ನನ್ನ ಪತಿದೇವರ ವೀರಮಾರ್ಗ ವನ್ನು ಅನುಸರಿಸಿ ಸಾಗಿದೆನು. ಅವಳು ಪ್ರೇಮಯೋಗಿನಿ; ನಾನು ಕ್ಷಾತ್ರಕರ್ಮಿ.

ನಾನು ಕನ್ನಡಿಗರಿಗಾಗಿ ಯಾವ ಕೃತಿಯನ್ನೂ ಬರೆದಿಟ್ಟವಳಲ್ಲ. ಆದರೆ ಉದಾರಹೃದಯರಾದ ಕನ್ನಡ ಕವಿಗಳು, ನನ್ನನ್ನು ಕಾವ್ಯವಸ್ತು ವನ್ನಾಗಿ ಸ್ವೀಕರಿಸಿದರು; ತಮ್ಮ ಕಲ್ಪನೆಯ ಕಾವ್ಯಸೃಷ್ಟಿಯಲ್ಲಿ ನನ್ನನ್ನು ವೀರನಾಯಿಕೆಯನ್ನಾಗಿ ನಿರ್ಮಿಸಿದರು ನಾಟಕವನ್ನಾಡಿ ಇತಿಹಾಸದ ಪುನರಾವೃತ್ತಿಯನ್ನು ಮಾಡಿದರು; ವೀರಸಂದೇಶವನ್ನು ಹೇಳಿದರು

ಪ್ರೇಕ್ಷಕರ ವೈನೆತ್ತರವನ್ನು ಉಕ್ಕಿಸಿದರು; ಅವರಿಗೆ ವೀರರಸದ ಭೋಜನವನ್ನು ಮಾಡಿಸಿದರು ಇಷ್ಟಕ್ಕೇ ನಾನು ಸಾರ್ಥಕಗೊಳ್ಳಲಾರೆನು. ನೈರಾವಣನ ಹನಿಹನಿಗೊಬ್ಬ ವೈರಾವಣನು ಹುಟ್ಟಿದಂತೆ ಚೆನ್ನಮ್ಮನ ಬಿಸಿನೆತ್ತರಿನ ಒಂದೊಂದು ಹನಿಯಿಂದಲೂ ಒಬ್ಬೊಬ್ಬ ವೀರಕನ್ನಡಿಗನು ಜನ್ಮವೆತ್ತಂತೆ ಕಂಡುಬರುವದಾದರೆ, ನಾನು ಸಾರ್ಥಕಗೊಳ್ಳುವೆನು.

ಜನ್ಮದಿಂದ ನಾನು ಅಬಲೆ; 'ಚೆನ್ನಮ್ಮ' ಎಂಬ ಲಲಿತ ಕೋಮಲವಾದ ಹೆಸರು ಆದರೇನು? ಒಳಗಿನ ವೀರವೃತ್ತಿಯನ್ನು ಧರಿಸಲು ಶರೀರವು ಅಸಮರ್ಥವಾಯಿತು; ಕೋಮಲನಾಮವು ಕಠೋರತನಕ್ಕೆ ಕಮರಿದಂತಾಯ್ತು. ಹಾಗಾದರೂ ಅಡ್ಡಿಯಿಲ್ಲ. ಆರಸಿಗೆ ಚೆನ್ನಮ್ಮ ಹೆಸರು ಚೆನ್ನಾದಂತೆ, ಹೆಸರಿಗೆ ತಕ್ಕಂತೆ ಬಾಳು ಚೆನ್ನಾದಂತೆ, ಪರಿಣಾಮವೂ ಚೆನ್ನಾಗಿದ್ದರೆ ನಿಮಗದರ ಬೆಲೆಯೇ ಕಂಡುಬರುತ್ತಿರಲಿಲ್ಲ. ವೈ-ಮನಗಳಿಗೆ ತುಕ್ಕು ಹಿಡಿದು ಕನ್ನಡಿಗರು ಕೈಲಾಗದವರಂತೆ ಪರಾವಲಂಬಿಗಳಾಗಿ ಬಿದ್ದುಕೊಂಡಿರುವಾಗ, ನನ್ನ ಜೀವನದ ದುಃಖಾಂತದೃಶ್ಯವೇ ಉಪಯೋಗಕ್ಕೆ ಬರುವಂಥದು. ಆ ದೃಶ್ಯವು ಕನ್ನಡಿಗರ ಕಣ್ಣುತೆರೆಸುವುದಕ್ಕೆ ಪ್ರಖರ ಜ್ಯೋತಿಯಾಯ್ತು; ಆ ವಿನಾಶವು, ಹೇಡಿತನದ ವಾಯುಹಿಡಿದ ಕನ್ನಡಿಗರ ಅಂಗಾಂಗಗಳ ಮೇಲೆ ಬರೆ ಎಳೆಯುವ ಕಾಯ್ದ ಸಲಾಕೆಯಾಯ್ತು; ಆ ಸ್ಮರಣವು ಕನ್ನಡಿಗರ ಕಗ್ಗತ್ತಲೆಯನ್ನು ಕತ್ತರಿಸಿಹಾಕುವ ವಿದ್ಯುಲ್ಲತೆಯಾಯ್ತು. ಇದೇನು ಸಣ್ಣಪುಟ್ಟ ಮಾತೇ?

ಗುರಿಯು ಹಿರಿದಿರಲಿ ಕಿರಿದಿರಲಿ, ಅದಕ್ಕಾಗಿ ಸರ್ವಸ್ವವನ್ನಲ್ಲದೆ ಪ್ರಾಣವನ್ನು ಸಹ ನೀಡ ನಿಂತ ಪಾಠವನ್ನು ಬ್ರಿಟಿಶರಿಗೆ ಅವರ ಗುರು ಕಲಿಸಿಕೊಟ್ಟಿದ್ದಾನೆಂಬುದನ್ನು ಆಧುನಿಕ ಸುಶಿಕ್ಷಿತರು ಓದಿರುವಿರಿ. ಆದರೆ, ಕನ್ನಡಿಗರ ಕುಲಧರ್ಮದಲ್ಲಿ ಅಂಥದೊಂದು ಪಾಠವಿಲ್ಲದೆ ಇಲ್ಲ. ಆ ಪಾಠವು ಇಂದಿಗೂ ಕನ್ನಡನಾಡಿನಲ್ಲಿ ನಾಣ್ಣುಡಿಯಾಗಿ ನಿಂತಿದೆ. "ಶರಣರ ಗುಣವನ್ನು ಮರಣದಲ್ಲಿ ನೋಡು" ಈ ನಾಣ್ಣುಡಿಯಲ್ಲಿ ನಾನು ಕಂಡ ಅರ್ಥವೇನೆಂದರೆ - ತನ್ನ ಜೀವಿತೋದ್ದೇಶವನ್ನು ತಿಳಿದು, ಅದಕ್ಕೆ ಮಾರುಹೋದವನು ಶರಣನು; ಉದ್ದೇಶಸಾಧನೆಗಾಗಿ ಮರಣಹೊಂದಿದರೆ, ಅವನು ಧ್ಯೇಯದಡಿಯಲ್ಲಿ ತನ್ನನ್ನು ತಾನು ಸಂಪೂರ್ಣವಾಗಿ ಅರ್ಪಿಸಿದವನೆಂಬುದು

ಸ್ಪಷ್ಟವಾಗುತ್ತದೆ. ಈ ನಿಲವಿನಲ್ಲಿ ನಿಂತ ಮನುಷ್ಯನು ಹಿಡಿದ ಕೆಲಸವು ಮಹಾನವಿರಲಿ ಕ್ಷುಲ್ಲಕವಿರಲಿ; ಆತನು ಹಳ್ಳಿಗನಿರಲಿ ಪಟ್ಟಣಿಗನಿರಲಿ; ಅವನು ಯಾರಿಗೂ ಅಂಜದೆ, ಯಾತಕ್ಕೂ ಸೊಪ್ಪುಹಾಕದೆ ತನ್ನ ಜೀವಿತ ಕಾರ್ಯವನ್ನು ಸಾಗಿಸುವನೆಂಬ ಮಾತು ಪ್ರತಿ ಒಬ್ಬರ ಅನುಭವಕ್ಕೆ ಬಂದಿರಲು ಸಾಕು ಅವನ ಮುಂದೆ ಬುದ್ಧಿವಂತರು ಮಂಕಾಗುವರು; ಶ್ರೀಮಂತರು ಕಂಗಾಲಾಗುವರು.

ಕನ್ನಡ ಕುವರರು ಧ್ಯೇಯವಾದಿಗಳಾಗಲಿ; ಅವರಿಗೆ ಶಾಲೆ-ಕಾಲೇಜುಗಳಲ್ಲಿ ಅದಕ್ಕೆ ಪ್ರೋಷಕವಾಗುವ ವಿದ್ಯೆಯನ್ನೇ ದಾನಮಾಡಲಿ; ಮನೆಯಲ್ಲಿ ತಾಯಿ ತಂದೆಗಳಾದವರು ಆ ಬೆಳೆಗೆ ತಕ್ಕ ಗೊಬ್ಬರವನ್ನು ಹಾಕಲಿ ಧ್ಯೇಯದ ಧ್ರುವಚಿಕ್ಕೆಯನ್ನೇ ಕಾಣುವವರು ನಿರ್ಭಯರೂ, ಅದರಿಂದ ವೀರವೃತ್ತಿಯುವರೂ ಆಗದೆ ಉಳಿಯರು. ಅದೊಂದಿದ್ದರೆ ನಮ್ಮ ನಾಡಿನ ಜಡತನವು ಎದೆಗೆಡಿಸದು; ನಮ್ಮವರ ಅಶಿಕ್ಷಿತತನವು ಎದೆಯೊಡಿಸದು. ಅಂಥಲ್ಲಿ ಸಾಹಸವು ಹದಗೊಳ್ಳುವದು; ಉದ್ಯೋಗ ಪ್ರೀತಿಯು ಕಂಗೊಳಿಸುವದು; ತನ್ನ ಹಾಗೂ ತನ್ನ ನಾಡಿನ ಉನ್ನತಿಯ ದಿಶೆಯು ನಿಚ್ಚಳವಾಗುವದು.

ವ್ಯಕ್ತಿಯು ನಾಡಿನ ಒಂದು ಅಂಗವಾಗಿಯೂ, ಘಟಕವಾಗಿಯೂ ಬೆಳೆಯ ತೊಡಗಿದ್ದರೆ ನಾಡ ಕಲ್ಯಾಣವು ಸುಸಾಧ್ಯವಾಗುವದು. ಅದು ವಿಶ್ವಪ್ರಗತಿಗೆ ಸಹಜವಾದ ಬೆಳಗೆಯಾಗುವದು; ಸುಲಭವಾಗುವದು. ಅಂಥ ಕಾಲವು ಬೇಗನೆ ಬರಲಿರುವದರಿಂದ ನಾಡಿಗರಲ್ಲಿ ಧ್ಯೇಯಪ್ರೀತಿಯೂ, ಪ್ರಗತಿಯ ಆಶೆಯೂ ಮೊಳೆಯುತ್ತಲಿದೆಯೆನ್ನಬೇಕು ವೈಯಕ್ತಿಕ ಕಲ್ಯಾಣವು ನಾಡಕಲ್ಯಾಣದ ಮುಂದೆ ಕ್ಷುಲ್ಲಕವಸ್ತು. ಮಹಾಯಜ್ಞದಲ್ಲಿ ವೈಯಕ್ತಿಕ ಕಲ್ಯಾಣವನ್ನು ಆಹುತಿಯಾಗಿ ಕೊಡುವ ವೀರವೃತ್ತಿಯು, ಎಲ್ಲೆಲ್ಲಿಯೂ ಮೊಳೆಯಲಿ; ಅದು ಪಲ್ಲವಿಸಿ, ಹೂತು ಕಾತರೆ ನನ್ನ ಆತ್ಮಕ್ಕೆ ಚಿರಶಾಂತಿ ಲಭಿಸುವದು. ಕನ್ನಡಿಗರು ನನ್ನಾತ್ಮಕ್ಕೆ ಚಿರಶಾಂತಿಯನ್ನು ತಂದುಕೊಡುವರೇ ?

ಇಂತು—ತಮ್ಮ—ನಚ್ಚಿನ
ಚೆನ್ನಮ್ಮರಾಣಿ

---